16

# ಅಚಲ

ದ್ವೈಮಾಸಿಕ, ಮೇ 8, 1993





ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

ಸಂಪುಟ : 9 ಸಂಚಿಕೆ : 2

"ಅಚಲ" ಪತ್ರಿಕೆಯನ್ನು ಪಡೆಯ ಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನೈದು ರೂಪಾಯಿ ಗಳನ್ನು ಎಂ. ಓ/ಡ್ರಾಫ್ಟ್ ಮೂಲಕ ಕಳುಹಿಸಿ, ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯ ಬೇಕು. ಚೆಕ್ ಮೂಲಕ ಹಣ ಕಳಿಸುವವರು 20/ರೂ. ಗಳಿಗೆ ಕಳಿಸಬೇಕು. ಚಂದಾದಾರರು ತಮ್ಮ ವಿಳಾಸ ಬದ ಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

ಸಂಪಾದಕ ಮಂಡಳಿ :

ಎಸ್, ಗಾಯತ್ರಿ, ನೇಮಿಚಂದ್ರ, ದೇವಿ,
ಡಾ|| ಬಿ. ಎನ್. ಸುಮಿತ್ರಾಬಾಯಿ.

ಚಂದಾ ವಿವರ :

| | | |
|---|---|---|
| ವಾರ್ಷಿಕ ಚಂದಾ | : | ರೂ. 15.00 |
| ಆಜೀವ ಚಂದಾ | : | ರೂ. 150.00 |
| (ಚೆಕ್ ಮೂಲಕ | : | ರೂ. 160.00) |
| ಸಂಸ್ಥೆಗಳಿಗೆ | : | ರೂ. 200.00 |
| ಬಿಡಿ ಪ್ರತಿ | : | ರೂ. 2.00 |
| ವಿಶೇಷ ಪ್ರತಿ | : | ರೂ. 3.50 |

**Printed at Lipi Mudrana,**
**No. 1, Bugle Rock Road, Bangalore-4.**
**Published by, Dr. G. Ramakrishna on behalf of Jagruthi Mahila Adhyayana Kendra, 261, I Main Road, Vyalikaval, Bangalore-3**

**ಲೇಖನ, ಹಣ ಕಳುಹಿಸಬೇಕಾದ ವಿಳಾಸ :-**

ಎಸ್. ಗಾಯತ್ರಿ
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್,
9ನೇ ಕ್ರಾಸ್, ಒಂದನೇ ಮೇನ್
ವಿಜಯನಗರ 2ನೇ ಹಂತ
ಬೆಂಗಳೂರು : 560 040

## ಅಭಿನಂದನೆ

ಭಾರತದ ಮೊದಲ ಸರ್ವ ಮಹಿಳಾ ಪರ್ವತಾರೋಹಿ ಗಳ ತಂಡ ಮೇ 10ರಂದು ವಿಶ್ವದ ಅತಿ ಎತ್ತರದ ಶಿಖರ ವಾದ ಮೌಂಟ್ ಎವರೆಸ್ಟನ್ನು ಏರಿ ದಾಖಲೆ ಸ್ಥಾಪಿಸಿ ದ್ದಾರೆ. ತಂಡದ ಸದಸ್ಯರಾದ ಶ್ರೀಮತಿ ಸಂತೋಷ್ ಯಾದವ್, ಕುಂಗಾ ಭೂಟಿಯ ಮತ್ತು ಡಿಕಿ ಡೋಲ್ಮಾ ಅವರನ್ನು ಅಚಲ ಅಭಿನಂದಿಸುತ್ತದೆ.

ಮೇ ತಿಂಗಳ ಈ ಸಂಚಿಕೆಗೆ ತಮ್ಮ ಚಿತ್ರಕಲೆಯ ಪರಿ ಚಯ ಲೇಖನವನ್ನು ಬಳಸಲು ಅನುಮತಿಸಿದ್ದಕ್ಕಾಗಿ ಕಲಾವಿದೆ ಶ್ರೀಮತಿ ಶೀಲಾಗೌಡ ಅವರಿಗೆ ಮತ್ತು ಚಿತ್ರ ಕಲಾ ವಿಮರ್ಶಕ ಶ್ರೀ ಕೆ.ಎಸ್. ಶ್ರೀನಿವಾಸಮೂರ್ತಿ ಯವರಿಗೆ ನಮ್ಮ ಕೃತಜ್ಞತೆಗಳು.

— **ಸಂಪಾದಕರು**

# ಪರಿಪೂರ್ಣತೆಯತ್ತ ದುಡಿಯುವ ಮಹಿಳೆ....

ದುಡಿಯುವ ಜನತೆಗೆ ಜಾಗತಿಕ ಇತಿಹಾಸದಲ್ಲೇ ಗೌರವವನ್ನು ದೊರಕಿಸಿಕೊಟ್ಟ ಮೇ ದಿನ ಮತ್ತೆ ಬಂದಿದೆ. ಈ ಸಂದರ್ಭದಲ್ಲಿ ದುಡಿಯುವ ಮಹಿಳೆ ಈ ಗೌರವಕ್ಕೆ ಎಷ್ಟು ಪಾಲು ಅರ್ಹಳು, ಏಕೆ ಮತ್ತು ಹೇಗೆ ಎಂಬಂತಹ ಕೆಲವು ಚಿಂತನೆಯ ಎಳೆಗಳನ್ನು ಒಂದು ಕ್ಷಣ ಅವಲೋಕಿಸಬಹುದು.

ಕೈಗಾರೀಕಾಕ್ರಾಂತಿಯ ಪೂರ್ವದ ಸಮಾಜದಲ್ಲಿ ಕೂಲಿ ಕೆಲಸ ಮತ್ತು ಮನೆಗೆಲಸದ ನಡುವೆ ವಿಭಜನೆ ಹೆಚ್ಚು ನಿಖರವಾಗಿ ಇಲ್ಲದ ಸಂದರ್ಭದಲ್ಲಿ ಮಹಿಳೆಯ ಶೋಷಣೆಯ ಸ್ವರೂಪವೇ ಬೇರೆ ಇತ್ತು. ನಂತರ ಕೈಗಾರಿಕೀಕರಣದ ಸಂದರ್ಭದಲ್ಲಿ ಕೂಲಿ ಕೆಲಸ ಮತ್ತು ಮನೆಗೆಲಸದ ನಡುವೆ ವಿಭಜನೆ ಸ್ಪಷ್ಟವಾಯಿತು; ಲಿಂಗ ಭೇದ ಹೆಚ್ಚು ಉಗ್ರವಾಯಿತು. ವೇತನರಹಿತ ದುಡಿಮೆಗೆ ಸೀಮಿತಳಾದ ಮಹಿಳೆ ಹೆಚ್ಚು ಶೋಷಣೆಗೆ ಒಳಗಾದಳು.

'ಉದ್ಯೋಗಂ ಪುರುಷಲಕ್ಷಣಂ' ಎಂದ ಭಾರತೀಯ ಸಮಾಜವಂತೂ ಹೆಣ್ಣಿನ ದುಡಿಮೆಯನ್ನು ಬೆಲೆಯುಳ್ಳದ್ದಾಗಿ ಕಂಡದ್ದು ಕಡಿಮೆಯೇ. ಮನೆಗೆಲಸದ ಚಾಕರಿಯ ಜೊತೆ ಜೊತೆಗೇ ಹೊಲದಲ್ಲಿ, ಕಾರ್ಖಾನೆಗಳಲ್ಲಿ, ಕಚೇರಿಯಲ್ಲಿ ದುಡಿಯಲು ಹೊರಟ ಮಹಿಳೆ ಅನಂತಮುಖಗಳ, ಅನಂತ ಪಾತ್ರಗಳ ಹೊರೆಯಲ್ಲಿ ತತ್ತರಿಸಿದಳು. ವಿದ್ಯೆ ಮತ್ತು ನೌಕರಿ ಹೆಣ್ಣಿಗೆ ಹೊಸ್ತಿಲಾಚೆ ಬರುವ ಅವಕಾಶವನ್ನು ಕೊಟ್ಟದ್ದನ್ನು ಯಾರೂ ಅಲ್ಲಗಳೆಯಲಾರರಾದರೂ, ಅವಳ ಹಣದ ಥೈಲಿಗೆ ಕೊಟ್ಟಷ್ಟು ಬೆಲೆಯನ್ನು ಅವಳ ವ್ಯಕ್ತಿತ್ವಕ್ಕೆ ಕೊಟ್ಟರೇ ? ಇಲ್ಲ. ಹೆಣ್ಣಿನ ಮಗಳು, ಸೊಸೆ, ತಾಯಿಯ ಪಾತ್ರಗಳಲ್ಲಿ, ಜವಾಬ್ದಾರಿಗಳಲ್ಲಿ ಕಿಂಚಿತ್ತೂ ಬದಲಾಗಲಿಲ್ಲ; ಈ ಸಾಮಾಜಿಕ ಪಾತ್ರಗಳಿಗೆ ಸಂಬಂಧಪಟ್ಟ ಮೌಲ್ಯಗಳೂ ಬದಲಾಗಲಿಲ್ಲ. ಉತ್ಪಾದನಾ ವ್ಯವಸ್ಥೆ ಎಷ್ಟೇ ವೇಗವಾಗಿ ಬದಲಾಗುತ್ತಾ ಹೊರಟರೂ, ಈ ವ್ಯವಸ್ಥೆಯ ಭಾಗವಾದ ಮಹಿಳೆಯನ್ನು ಕುರಿತ ಚಿಂತನೆಗಳಲ್ಲಿ ಮೂಲಭೂತ ಬದಲಾವಣೆಗಳೇನೂ ಸ್ಪಷ್ಟವಾಗಿ ಕಂಡುಬರಲಿಲ್ಲ. ಗೃಹಕೃತ್ಯದ ಚಾಕರಿಯಲ್ಲಿ ದುಡಿಯುವ ಹೆಣ್ಣಿಗೆ ಸಿಕ್ಕಿದ ರಿಯಾಯಿತಿಯೂ ಅಷ್ಟರಲ್ಲೇ ಇದೆ.

ಮನೆಗೆಲಸಕ್ಕೆ ಕೂಲಿ ಕೊಡಿ ಎಂದು ಕೇಳುವುದು ಇಲ್ಲವೇ, ಮನೆಯಲ್ಲಿರುವವರೆಲ್ಲಾ ಎಲ್ಲಾ ಕೆಲಸ ಮಾಡಿ ಎಂದು ವಿಧಿಸುವುದು ಘೋಷಣೆಯಾಗಿ ಆಕರ್ಷಕವಾಗ ಒಹುದಾದರೂ ವಸ್ತು ಸ್ಥಿತಿ ಘೋಷಣೆಯಷ್ಟು ಸರಳವೂ ಅಲ್ಲ; ಸುಲಭವೂ ಅಲ್ಲ. ಗೃಹಕೃತ್ಯದ ಚಾಕರಿಯೊಂದಿಗೆ ಹೆಣ್ಣಿನ ಸಂಬಂಧ ಸಾಂಪ್ರದಾಯಿಕವಾಗಿ ಮತ್ತು ರೂಢಿಗತವಾಗಿ ಸ್ಥಿರಪಟ್ಟಿರುವಾಗ ಈ ಮೌಲ್ಯಗಳು ಬದಲಾದರೆ ಗಂಡಸಿನ 'ಅಹಂ'ಗೆ ಧಕ್ಕೆ ಒದಗುವುದಿಲ್ಲವೇ ? ಹಾಗೆಂದರೆ ಗಂಡಸು ಗೃಹಕೃತ್ಯದ ಜವಾಬ್ದಾರಿಗಳನ್ನು ಹಂಚಿಕೊಳ್ಳುವುದಿಲ್ಲವೆಂದೇನೂ ಇಲ್ಲ. ಈ ಸಂಖ್ಯೆ ಮತ್ತು ಇಂತಹ ದೃಷ್ಟಿಕೋನ ನಮ್ಮ ಸಮಾಜದಲ್ಲಿ ತೀರ ಕಡಿಮೆಯಷ್ಟೇ ಅಲ್ಲ, ಅದಿನ್ನೂ ಸಮಾಜದಲ್ಲಿ ಒಪ್ಪಿತವಾದ ಮೌಲ್ಯ ವ್ಯವಸ್ಥೆಯಾಗಿಲ್ಲ. ಕೈಬಾಯಿ ಸುಟ್ಟುಕೊಂಡು ಬೇಯಿಸಿಕೊಳ್ಳುವ ಇಲ್ಲವೆ, ಹೋಟೆಲ್ ಊಟದ ನರಕಯಾತನೆಯನ್ನು ಗಂಡುಗಳಿಗೆ ತಪ್ಪಿಸಲೆಂದೇ ಮದುವೆ ಮಾಡಬೇಕೆಂದು ಹೇಳುವ ಹಿರಿಯರಿರುವ ಸಮಾಜದಲ್ಲಿ ಹೆಣ್ಣು–ಗಂಡುಗಳ ಪಾತ್ರದ ಬಗ್ಗೆ ಅನುಮಾನವೇ ಇಲ್ಲ.

ದುಡಿಮೆಯ ಅವಕಾಶ ದೊರೆತು ಅಡಿಗೆ ಮನೆಯಿಂದ ಹೊರಗೆ ಸ್ವಲ್ಪ ಕಾಲವಾದರೂ ಹೊರ ಬಂದ ಮಹಿಳೆ ತನ್ನ ಸಾಮರ್ಥ್ಯವನ್ನು ಸ್ಥಿರಪಡಿಸಬೇಕಾದ ಅಗತ್ಯ ಕಂಡುಕೊಂಡಳು. 'ತೊಟ್ಟಿಲು ತೂಗುವ ಕೈ ಲೋಕದ ಸೂತ್ರವನ್ನೂ ಹಿಡಿಯಬಲ್ಲದು' ಎನ್ನುವುದನ್ನು ಸ್ಥಿರಪಡಿಸುವ ಸಂಭ್ರಮದಲ್ಲಿ ಹೊರಗೆ ದುಡಿಯುತ್ತಲೇ ತೊಟ್ಟಿಲು, ಸೌಟುಗಳಿಗೆ ಸರಿಯಾದ ನ್ಯಾಯ ದೊರಕಿಸಿಕೊಡಬೇಕೆಂಬ ಹಠ ಮತ್ತು ಹುಚ್ಚು ಹಂಬಲ ಹೆಣ್ಣಿನ ಹೊರೆಯನ್ನು ದ್ವಿಗುಣಗೊಳಿಸಿತು. ಈ ಪಾತ್ರದಲ್ಲಿ ಸ್ವಲ್ಪ ಏರು ಪೇರಾದರೂ ಪಾಪ ಪ್ರಜ್ಞೆಯಲ್ಲಿ ನರಳಿದ್ದೂ ಈ ಹೆಣ್ಣೇ. 'ಪಿತೃತ್ವ'ದ ಬಾಧ್ಯತೆಯ ಪ್ರಶ್ನೆಯೇ ಇರದ ಸಮಾಜ

ದಲ್ಲಿ ಮಗುವಿಗೆ ಸಂಬಂಧಪಟ್ಟಂತೆ ಚುರುಕ್ ಎನಿಸಬೇಕಾದ್ದು ದುಡಿಯುವ ತಾಯಿಯ ಕರುಳೇ ಹೊರತು ತಂದೆಯದಲ್ಲವಲ್ಲ! ಈ ಎಲ್ಲ ಹೊರೆಗಳೂ ಅವಳು ಆದರ್ಶ ದುಡಿಮೆಗಾರಳಾಗುವ ಅವಕಾಶವನ್ನು ತಪ್ಪಿಸಿದವು. ಬಹುಮುಖ್ಯವಾಗಿ ದುಡಿಯುವ ಕ್ಷೇತ್ರದಲ್ಲಿ ಅವಳ ಹಕ್ಕು ಬಾಧ್ಯತೆಗಳನ್ನು ಸಮರ್ಥವಾಗಿ ನಿರ್ವಹಿಸುವಲ್ಲಿ ಶಕ್ತಿ, ಕ್ರಿಯೆಗಳ ಲೋಪದಿಂದ ಹೆಣ್ಣು ನರಳಬೇಕಾಯಿತು.

ಈ ಸ್ಥಿತಿಯಿಂದ ಎಚ್ಚರಗೊಂಡ ಅಲ್ಪಸಂಖ್ಯಾತ ಜಾಗೃತ ಮಹಿಳೆಯರೂ ಇಲ್ಲದಿಲ್ಲ! ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ತಮ್ಮ ಸ್ಥಾನವನ್ನು ಸಮರ್ಥಿಸಿಕೊಂಡ, ಅನವಶ್ಯಕವಾಗಿ ದಬ್ಬಾಳಿಕೆಗೆ ಸಿಕ್ಕಿಕೊಳ್ಳದ ಮಹಿಳೆಯರು ಸಂಖ್ಯೆಯಲ್ಲಿ ಕಡಿಮೆಯೇ ಆದರೂ ಈ ಮಂದಿಯೇ ಸಮಾಜ ವ್ಯವಸ್ಥೆಯ ರೂಢಿಗತ ಮೌಲ್ಯಗಳಿಗೆ ಶಾಕ್ ಟ್ರೀಟ್‌ಮೆಂಟ್ ಕೊಟ್ಟವರೂ ಆಗಿದ್ದಾರೆ. ಮಗುವಿನ ಲಾಲನೆ ಪಾಲನೆ, ಗೃಹಕೃತ್ಯದ ಚಾಕರಿಗಳಲ್ಲಿ ಪುರುಷರ ಸಹಭಾಗಿತ್ವವನ್ನು ಅಪೇಕ್ಷಿಸುವ ಈ ಕೆಲವೇ ಮಂದಿ ಆರಾಮವಾಗಿ ಜೀವನ ಸಾಗಿಸುವ ಪುರುಷರಿಗೆ ಭಯೋತ್ಪಾದಕರಾಗಿ ಗೋಚರವಾದರೆ ಆಶ್ಚರ್ಯವಿಲ್ಲ. ಪ್ರಗತಿಪರರೆಂಬ ಹಣೆಪಟ್ಟಿ ಕಟ್ಟಿಕೊಂಡ ಪುರುಷರೂ ತಮ್ಮ ಮಡದಿಯರು ಸಂಬಳದ ಚಾಕರಿ ದುಡಿಯುತ್ತಲೇ ಮನೆಯಲ್ಲಿ ಮಸಾಲೆ ಅರೆಯುತ್ತ, ತೊಟ್ಟಿಲು ತೂಗುತ್ತಾ ಗಂಡನ ಬೇಕು ಬೇಡಗಳನ್ನು ಆದರ್ಶ ಗೃಹಿಣಿಯಾಗಿ ನೆರವೇರಿಸುತ್ತಾ ಇರಲೆಂದೇ ಬಯಸಿದರೆ ಮತ್ತು ಅಂತಹ ಅವಕಾಶವನ್ನು ದಕ್ಕಿಸಿಕೊಂಡರೆ ಅವರ ಪ್ರಗತಿಪರತೆಯ ಮಾನದಂಡವೇನು ?

ಆದರೆ ಇಂದು ದುಡಿಯುವ ಮಹಿಳೆ ಈ ಎಲ್ಲ ಸ್ಥಿತ್ಯಂತರಗಳನ್ನು ದಾಟಿ ಶ್ರಮಶಕ್ತಿಯ ಸಂಕೇತವಾಗಿ ನಿಂತಿದ್ದಾಳೆ. ಈ ಶ್ರಮಶಕ್ತಿಯನ್ನು ಅವಳು ಯಾವ ರೀತಿ ವ್ಯಾಖ್ಯಾನಿಸಿಕೊಳ್ಳುತ್ತಾಳೆ ಮತ್ತು ತನ್ನನ್ನು ಯಾವ ರೀತಿ ಸಮರ್ಥಿಸಿಕೊಳ್ಳುತ್ತಾಳೆ ಹಾಗೂ ತನ್ನ ಸುತ್ತ ಹಬ್ಬಿರುವ ಪುರಾಣವನ್ನು ಹೇಗೆ ಬಿಚ್ಚುತ್ತಾಳೆ, ಎಂಬುದೇ ಹೆಚ್ಚು ಸಕಾಲಿಕವೂ, ಮೌಲಿಕವೂ ಆದ ಪ್ರಶ್ನೆಯಾಗಿದೆ. "ಮಹಿಳೆಯರು ಸಾಮಾಜಿಕವಾಗಿ ಉತ್ಪನ್ನಕಾರಕ ದುಡಿಮೆಯಲ್ಲಿ ಪಾಲ್ಗೊಂಡು ಗೃಹಕೃತ್ಯದ ದಾಸ್ಯತನದಿಂದ ವಿಮೋಚನೆ ಹೊಂದುವಂತಾಗಬೇಕಾಗಬೇಕು ಮತ್ತು ಈ ಮಹಿಳೆಯರು ಅಡಿಗೆಯ, ತಾಯ್ತನದ ಮತ್ತು ದಾದಿಯ ಕೆಲಸದಲ್ಲೇ ಮರುಳಾಗಿ, ಅಪಮಾನಕ್ಕೆ ಗುರಿಯಾಗುವಂತಿದ್ದು, ನಿರಂತರ ದಾಸ್ಯಕ್ಕೆ ಒಳಪಟ್ಟು ಶಾಶ್ವತ ಗುಲಾಮ ಚಾಕರಿಯಿಂದ ಮುಕ್ತರಾಗಬೇಕಾದದ್ದು ಅತ್ಯವಶ್ಯಕ" ಎಂದ ಲೆನಿನ್‌ನ ಮಾತುಗಳು ಇಂದು ನಮಗೆ ಹೆಚ್ಚು ಹೆಚ್ಚು ಕಾರ್ಯರೂಪಕ್ಕೆ ಅಗತ್ಯವಾದ ಸೂತ್ರವಾಗಿದೆ.

ಸ್ತ್ರೀ-ಪುರುಷರ ಕ್ಷೇತ್ರಗಳು ಒಂದಕ್ಕೊಂದು ಪೂರಕ ಹಾಗೂ ಪ್ರತ್ಯೇಕ ಎಂಬ ವಾದವನ್ನು ಎಷ್ಟೇ ತಿಪ್ಪೆ ಸಾರಿಸಿ ಯಾರ ಸಮಾಧಾನಕ್ಕಾಗಿಯೋ ಮತ್ತೆ ಮತ್ತೆ ಹೇಳುತ್ತಾ ಬಂದರೂ ಇಂತಹ ವಿಭಜನೆ ಪುರುಷರನ್ನು ಮೇಲ್ಮಟ್ಟಕ್ಕೂ ಸ್ತ್ರೀಯರನ್ನು ಕೆಳಮಟ್ಟಕ್ಕೂ ತಳ್ಳಿದೆ ಎಂಬ ಅಂಶವನ್ನು ಯಾರೂ ಅಲ್ಲಗಳೆಯಲು ಸಾಧ್ಯವಾಗದು. ಕುಟುಂಬದಲ್ಲಿಯ ತನ್ನ ದಾಸ್ಯದ ಬೇರುಗಳು ಆಳುವ ವರ್ಗದ 'ವರ್ಗಸಮಾಜ'ದಲ್ಲಿವೆ ಎಂಬುದನ್ನು ಮನವರಿಕೆ ಮಾಡಿಕೊಂಡ ಹೆಣ್ಣು ಕುಟುಂಬದ ಸದಸ್ಯೆಯಾಗಿ ಹಾಗೂ ಕಾರ್ಖಾನೆಯ ಕಾರ್ಮಿಕಳಾಗಿ ಒಟ್ಟು ಸಮಾಜ ಬದಲಾವಣೆಗಾಗಿ ಹೋರಾಡಬಲ್ಲಳು.

ಶತಶತಮಾನಗಳಿಂದಲೂ ಮಾನಸಿಕವಾಗಿಯೂ, ದೈಹಿಕವಾಗಿಯೂ ಗೃಹಚಾಕರಿಗೆ ತಮ್ಮನ್ನು ಒಗ್ಗಿಸಿಕೊಳ್ಳದ ಪುರುಷ ಸಮುದಾಯವನ್ನು ಈ ದಿಸೆಯತ್ತ ಬಗ್ಗಿಸುವ ಕೆಲಸ ಆಗಬೇಕಾಗಿದೆ. ಖ್ಯಾತ ಸ್ತ್ರೀವಾದಿ ಗ್ಲೋರಿಯಾಸ್ಟೈಮ್‌ಳ ಮಾತುಗಳ ಈ ಕೆಳಗಿನ ಸಾಲುಗಳು ಮತ್ತೆ ಮತ್ತೆ ನಮ್ಮ ಮನಸ್ಸಿನಲ್ಲಿ ಅನುರಣನಗೊಳ್ಳಬೇಕಾದ್ದು ಇಂದಿಗೆ ಸಕಾಲಿಕವಾಗಿದೆ—"ನಮ್ಮನ್ನು ಪೂರ್ಣಗೊಳಿಸಿಕೊಳ್ಳುವುದೇ ಈಗಿನ ಗುರಿ. ಹೆಚ್ಚು ಪ್ರತಿಪಾದಿಸಿಕೊಳ್ಳುವುದರಲ್ಲಿ, ಹೆಚ್ಚು ಮಹತ್ವಾಕಾಂಕ್ಷಿಯಾಗುವುದರಲ್ಲಿ, ಸಂಘರ್ಷದ ಜತೆಗೆ ಸಮರ್ಥ ನಿರ್ವಹಣೆ ಹಾಗೂ ಮನೆ ಹೊರಗೆ ಹೆಚ್ಚು ಚಟುವಟಿಕೆಯಿಂದಿರುವುದರಲ್ಲಿ ಮಹಿಳೆಯರ ಪ್ರಗತಿ ಅಡಗಿದೆ. ಹೆಚ್ಚು ತೀಕ್ಷ್ಣ, ಹೆಚ್ಚು ಸಹಾನುಭೂತಿ, ಮನೆಗೆಲಸದಲ್ಲಿ ಹೆಚ್ಚು ಹಿತ ಅನುಭವಿಸುವುದು ಇವೇ ಮುಂತಾದವುಗಳಲ್ಲಿ ಪುರುಷರ ಪ್ರಗತಿ ಅಡಗಿದೆ. ನಾವು ಸ್ಥಾನಗಳ ವಿಚಾರದಲ್ಲಿ ವ್ಯಾಪಾರ ಮಾಡುತ್ತಿಲ್ಲ. ನಾವು ಪರಿಪೂರ್ಣರಾಗಬಯಸುತ್ತೇವೆ, ಅಷ್ಟೆ". ಹೀಗೆ ಹೆಣ್ಣು ಪರಿಪೂರ್ಣಳಾಗಬೇಕಾದರೆ ಗಂಡು ತಾನು ಹೆಚ್ಚು ಅನುಭವಿಸುತ್ತಿರುವುದನ್ನು ತ್ಯಾಗ ಮಾಡಬೇಕಾಗುತ್ತದೆ. ದುಡಿಯುವ ಮಹಿಳೆಯ ಹೆಜ್ಜೆ ಪರಿಪೂರ್ಣತೆಯತ್ತ ಹೀಗೆ ಸಾಗಲೇಬೇಕಾಗುತ್ತದೆ.

— ಎನ್. ಗಾಯತ್ರಿ

# ಬದುಕಿಗೆ

ನಿನ್ನ ನಿಷ್ಪಂದ ತುಟಿಗಳ ಹೀಗೆ
ರಕ್ತಕಾರುವ ನನ್ನ ತುಟಿಗಳಿಗೆ ಒಡ್ಡಬೇಡ
ಬೋಳು ತಲೆಯ ಒಡಿನಸುತ್ತ ಹೇಗೆ
ಆಡಿಸಲಿ ನನ್ನ ಚಿಗುರುಬೆರಳುಗಳನ್ನು
ಮಸಕು ಕಣ್ಣಿನ ಬಾವಿಗೆ ಹೋಗಿ
ನನ್ನ ಪ್ರತಿಬಿಂಬ ಹುಡುಕುವುದಿಲ್ಲ
ನಿನ್ನ ಅತಂತ್ರ ತೆಕ್ಕೆಯಲ್ಲಿ ನಾನು ಹೀಗೆ
ಸೋರಿ ಹೋಗುವುದಕ್ಕೆ ಬಿಡುವುದಿಲ್ಲ
ನೀ ಹಾಸಿದ ಕಠೋರತೆಯ ಮೇಲೆ
ನಗೆಚೆಲ್ಲಿ ಓಡಾಡುತ್ತಿದ್ದೇನೆ
ನೀ ಬಡಿಸಿದ ನಿಷ್ಠುರತೆಯ
ಖುಷಿಯಿಂದ ಉಣ್ಣುತ್ತಿದ್ದೇನೆ
ಎಳೆದುಕೊಳ್ಳುತ್ತಿದ್ದೇನೆ
ನನ್ನ ಕನಸಿನ ಅವಶೇಷಗಳನ್ನು
ಅಂಗಳದಲ್ಲಿ ರೊಂಯನೇ ಬೆಟ್ಟ
ಗಿರಿಗಿರಿ ಸುತ್ತುವ ಬುಗುರಿ
ದಾರವನು ಬೆರಳಲ್ಲಿ ಸುತ್ತಿ
ನೋಡುತ್ತ ಆಡುತ್ತ ಸಂಜೆಯಾಯಿತೆಂದರೆ
ನಿನ್ನ ಕಿಸೆಯೊಳಗೆ
ತಣ್ಣನೇ ಮಲಗುವೆ ನಾನು

— ಸುಧಾಶರ್ಮಾ ಚವತ್ತಿ



# ಸ್ವಾತಂತ್ರ್ಯ ಪೂರ್ವದ ವಿಶಿಷ್ಟ ಲೇಖಕಿ

# ಜಯಲಕ್ಷ್ಮೀ ಶ್ರೀನಿವಾಸನ್

— ನೇಮಿಚಂದ್ರ

ಜಯಲಕ್ಷ್ಮೀ ಶ್ರೀನಿವಾಸನ್ ಅವರು ಡಿಸೆಂಬರ್ 12 1911 ರಂದು ತಮಿಳುನಾಡಿನ ಕರೂರು ತಾಲೂಕಿನ ಪಾಂಗಲ್ ಎಂಬ ಗ್ರಾಮದಲ್ಲಿ ಹುಟ್ಟಿದರು. ಎಂಟು ಮಕ್ಕಳಲ್ಲಿ ಹಿರಿಯವಳಾಗಿ ಜನಿಸಿದವರು ಜಯಲಕ್ಷ್ಮೀ. ತಂದೆ ರಾಜಮಂತ್ರ ಪ್ರವೀಣ ಎ.ವಿ. ರಾಮನಾಥನ್, ಹಾಗೂ ತಾಯಿ ಸೀತಾಲಕ್ಷ್ಮೀ ರಾಮನಾಥನ್. ಸುಶಿಕ್ಷಿತ ಕುಟುಂಬದಲ್ಲಿ ಜನಿಸಿದ ಜಯಲಕ್ಷ್ಮೀ ಹತ್ತನೇ ತರಗತಿ ಯವರೆಗೆ ಓದಿದವರು. 1924ರಲ್ಲಿ ಅವರ ಹದಿಮೂರನೇ ವಯಸ್ಸಿನಲ್ಲಿ ವಿವಾಹವಾಯಿತು. ಪತಿ, ಮೈಸೂರು ಸಿವಿಲ್ ಸರ್ವಿಸ್ಸಿನಲ್ಲಿ ಪ್ರಥಮ ಸ್ಥಾನದಲ್ಲಿ ತೇರ್ಗಡೆ ಗೊಂಡ ಕೆ. ಶ್ರೀನಿವಾಸನ್. ಮಾತೃ ಭಾಷೆ ತಮಿಳು. ಶಾಲೆಯಲ್ಲಿ ಕಲಿತ ಭಾಷೆ, ಬಂದು ನೆಲೆಸಿದ ಮೈಸೂರು ರಾಜ್ಯದ ಭಾಷೆ ಕನ್ನಡವನ್ನು ಚೆನ್ನಾಗಿಯೇ ಬಲ್ಲ ಈಕೆ ವಿವಾಹವಾದ ಮೇಲೆ ಇಂಗ್ಲಿಷ್, ಹಿಂದಿ ಭಾಷೆಗಳನ್ನೂ ಕಲಿತರು. 'ನಾನು ತಮಿಳುನಾಡಿನವಳು. ನನಗೆ ತಮಿಳು, ಕನ್ನಡವೂ ಎರಡೂ ಒಂದೇ. ನಾನು ಒಂದೇ ನಿಷ್ಠೆಯಿಂದ ಈ ಎರಡೂ ಭಾಷೆಗಳ ಸಾಹಿತ್ಯ ಸೇವೆ ಮಾಡುತ್ತಿರು ವುದೇ ಇದಕ್ಕೊಂದು ನಿದರ್ಶನ' ಎಂದು ತಮ್ಮ ಕಾದಂಬರಿ ಯೊಂದರ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಅನುಕೂಲಸ್ಥರ ಮನೆ ಸೇರಿದ ಜಯಲಕ್ಷ್ಮೀ ತಮ್ಮ ಬಿಡುವಿನ ಸಮಯದಲ್ಲಿ ಬರವಣಿಗೆಯಲ್ಲಿ ತೊಡಗಿದರು. 'ಸಾಮಾನ್ಯ ಜನರಿಗೆ ಉಪಯುಕ್ತವಾಗುವಂತಹ' ಸಾಮಾಜಿಕ ಕತೆ, ಕಾದಂಬರಿ, ಲೇಖನಗಳನ್ನು ಕನ್ನಡ ಹಾಗೂ ತಮಿಳಿನಲ್ಲಿ ಬರೆಯ ತೊಡಗಿದರು. ಕನ್ನಡದಲ್ಲಿ ಸರಸ್ವತಿ, ಸೋದರಿ, ಜನಪ್ರಗತಿ, ತ್ರಿವೇಣಿ, ಕಂಠೀರವ, ವಿನೋದ, ನಗುವನಂದ, ಕೊರವಂಜಿ, ಜೀವನ, ಭಾರತೀ ತಾಯಿನಾಡು, ಸುಬೋಧ, ವಿಶ್ವಕರ್ನಾಟಕ, ನವಜೀವನ ಸಾಧ್ವಿ, ಕಸ್ತೂರಿ, ಸಂಜೀವನ ತಮಿಳಿನ ವಸಂತಂ, ಕಾವೇರಿ, ಸ್ವದೇಶಿಮಿತ್ರನ್, ಜಗನ್ಮೋಹಿನಿ, ಅಮೋದ ಸುರಭಿ, ಮಂಗೈ, ಭಾರತಮಣಿ, ಪುದುಮೈ ಪೆಣ್ ಮುಂತಾದ ಪತ್ರಿಕೆಗಳಿಗೆ ಬರೆಯುತ್ತಿದ್ದ ಜಯಲಕ್ಷ್ಮಿ ಯವರು ಬರೆಯದಿದ್ದ ತಮಿಳು ಅಥವಾ ಕನ್ನಡ ಪತ್ರಿಕೆ ಗಳೇ ಇರಲಿಲ್ಲ ಎಂದರೆ ಉತ್ಪ್ರೇಕ್ಷೆಯಲ್ಲ.



## ವ್ಯಕ್ತಿವಿಶೇಷ...

ಒಂದಿಲ್ಲೊಂದು ಪತ್ರಿಕೆಗೆ ವಾರವಾರಕ್ಕೂ ಬರೆಯುವ ಜಯಲಕ್ಷ್ಮಿಯವರು, ದಿನಕ್ಕೆ ಐದಾರು ಗಂಟೆ ಬಿಡದೆ ಕುಳಿತು ಬರೆಯುತ್ತಿದ್ದರು. 1929ರಲ್ಲಿ ಜಯಲಕ್ಷ್ಮಿ ಯವರು ಕನ್ನಡ ಮತ್ತು ತಮಿಳು ಭಾಷೆಯಲ್ಲಿ 'ಗ್ರಾಮೋದ್ಧಾರಕ ರಾಮಚಂದ್ರ' ಕಾದಂಬರಿಯನ್ನು ಬರೆದರು. ಎರಡೂ ಭಾಷೆಗಳಲ್ಲಿ ಧಾರವಾಹಿಯಾಗಿ ಹರಿದು ಬಂದು, 1930ರಲ್ಲಿ ಪ್ರಕಟವಾದ ಇವರ ಪ್ರಥಮ ಕಾದಂಬರಿ ಇದು. 1929ರಲ್ಲಿ ತಂದೆ

ಎ.ವಿ. ರಾಮನಾಥನ್ ಅವರು ಕೋಲಾರ ಜಿಲ್ಲೆಯಲ್ಲಿ ಡೆಪ್ಯುಟಿ ಕಮೀಷನರ್ ಆಗಿದ್ದರು. ಅವರೊಡನೆ ನಾಲ್ಕಾರು ಗ್ರಾಮಗಳನ್ನು ಸುತ್ತಿ ಬಂದ ಜಯಲಕ್ಷ್ಮಿಯವರ ಮನಸ್ಸು ನಮ್ಮ ನಾಡ ಗ್ರಾಮಗಳ ಶೋಚನೀಯ ಸ್ಥಿತಿಯತ್ತ ಮಿಡಿಯಿತು. ಅವರ ಗ್ರಾಮೋದ್ಧಾರದ ಕನಸು ಈ ಕಾದಂಬರಿಯಾಗಿ ಹೊರಬಿತ್ತು. ಕತೆ ರತ್ನಪುರವೆಂಬ ಹಳ್ಳಿಯಲ್ಲಿ ಆರಂಭವಾಗುತ್ತದೆ. ಕಸ, ಕೆಸರು, ಸಗಣಿ, ಸೊಳ್ಳೆ ನೊಣಗಳು ತುಂಬಿದ ಕೊಳಕು ಹಳ್ಳಿ ರತ್ನಪುರ. ಅದೇ ಹಳ್ಳಿಯಲ್ಲಿ ಹುಟ್ಟಿ ಬೆಳೆದ ರಾಮಚಂದ್ರ ಮೈಸೂರಿನಲ್ಲಿ ಎಂ.ಎ. ಮುಗಿಸಿ ಹಳ್ಳಿಗೆ ಹಿಂತಿರುಗುತ್ತಾನೆ. ತಂದೆ–ತಾಯಿಯ ಆಸೆಯಂತೆ ಎಂ.ಸಿ.ಎಸ್. ಪರೀಕ್ಷೆ ಮುಗಿಸಿ ದೊಡ್ಡ ಹುದ್ದೆ ಹಿಡಿದು ಸಿರಿವಂತನಾಗುವುದು ಅವನ ಗುರಿಯಾಗಿರಲಿಲ್ಲ. ತನ್ನ ಹಳ್ಳಿಯನ್ನು ಉದ್ಧರಿಸುವ ಉದ್ದೇಶದಿಂದ ಹಿಂತಿರುಗಿದ ರಾಮಚಂದ್ರ ಹಳ್ಳಿಗರಿಗೆ ಶಿಕ್ಷಣ, ಶುಚಿತ್ವ, ಆರೋಗ್ಯದ ಮಹತ್ವವನ್ನು ತಿಳಿಸುತ್ತಾನೆ. ಹತ್ತು ಹಲವು ರಂಗದಲ್ಲಿದ್ದ ಸ್ನೇಹಿತರ ಸಹಾಯ ಪಡೆದು ಹಳ್ಳಿಗರಿಗೆ ವ್ಯವಸಾಯದ ಸುಧಾರಿತ ವಿಧಾನಗಳು, ಪಶುಪಾಲನೆ, ತೋಟಗಾರಿಕೆ, ಕರಕುಶಲಕಲೆ, ಊದುಬತ್ತಿ ತಯಾರಿಕೆಯ ಬಗೆ, ಹೀಗೆ ಆರ್ಥಿಕ ಅಭಿವೃದ್ಧಿಯ ಮಾರ್ಗಗಳನ್ನೂ ತೋರಿಸಿ, ಗ್ರಾಮೋದ್ಧಾರ ಮಾಡುವ ಕತೆ ಇದು.

**ಸದಾ ಬರೆಯುತ್ತಾ ಕುಳಿತ ತಾಯಿಯ ಮೇಲೆ ದೂರು ಹೊತ್ತು ಬಂದಾಗ, ಮಗ ಮುಕುಂದನಿಗೆ ತಂದೆ ಕೊಡುತ್ತಿದ್ದ ಉತ್ತರವೂ ಚಿನ್ನಿತ್ತು—'ಸದಾ ನಾವು ನಿನ್ನ ಬೆನ್ನ ಹಿಂದೆ ಇರಬಾರದು. ಮಕ್ಕಳು ನೋಡಿ ಕಲೀಬೇಕು, ಮಾಡಿ ಕಲೀಬೇಕು. ಹೇಳಿ ಹೇಳಿ ಕಲಿಯೋದಲ್ಲ' ಎನ್ನುತ್ತಿದ್ದರು. ಪತ್ನಿಯ ಬರಹದ ಬಗ್ಗೆ ಅಭಿಮಾನವನ್ನೇ ಹೊತ್ತ ಪತಿಯ ಕಾರಣವಾಗಿ ಜಯಲಕ್ಷ್ಮಿಯವರಿಗೆ ತಮ್ಮ ಬರಹದಲ್ಲಿ ಮಗ್ನರಾಗುವುದು ಅಷ್ಟು ಕಷ್ಟವಿರಲಿಲ್ಲ. ತಾವು ಸ್ವತಃ ದೊಡ್ಡ ಹುದ್ದೆಯಲ್ಲಿದ್ದರೂ, ಶ್ರೀನಿವಾಸನ್ ಅವರನ್ನು 'ಬರೆಯೋ ಜಯಲಕ್ಷ್ಮಿ ಯಜಮಾನ್ರು' ಎಂದು ಗುರುತಿಸುವವರಿದ್ದರು.**

ಅನುಕೂಲಸ್ಥರ ಮನೆಯಲ್ಲಿ ಹುಟ್ಟಿ, ಸ್ಥಿತಿವಂತರ ಮನೆ ಸೇರಿದರೂ, ಜಯಲಕ್ಷ್ಮಿಗೆ ಚಿಕ್ಕಂದಿನಿಂದಲೂ ಬಡಬಗ್ಗರು, ಖಾಯಿಲೆಯವರು, ವಯೋವೃದ್ಧರು ಎಂದರೆ ಮನಕರಗುತ್ತಿತ್ತು. ಅವರ ಈ ಕಳಕಳಿ ಅವರ ಕತೆ–ಲೇಖನಗಳಲ್ಲಿ ಅಭಿವ್ಯಕ್ತಿ ಪಡೆಯುತ್ತಿತ್ತು. ಅಷ್ಟೇ ಅಲ್ಲ, ಭಾರತ ಪರತಂತ್ರವಾಗಿದ್ದ ದಿನಗಳವು. ತಂದೆಯವರು ಮೈಸೂರು ರಾಜ್ಯದ ಸರಕಾರಿ ನೌಕರರು. ಪತಿಯೂ ಹಿಡಿದದ್ದು ಸರಕಾರಿ ಹುದ್ದೆಯನ್ನು. ಹೀಗಾಗಿ ಜಯಲಕ್ಷ್ಮಿಯವರ ಮನಸ್ಸು ದೇಶದ ಸ್ವಾತಂತ್ರ್ಯಕ್ಕೆ ತುಡಿದರೂ, ಮೈಸೂರಿನಲ್ಲಿ ಅವರೆಂದೂ ಪ್ರಕಟವಾಗಿ ಚಳುವಳಿಗೆ ಧುಮುಕಿದವರಲ್ಲ. ಆದರೆ ತಾಯಿಯೊಡನೆ ತಾಯ ತವರೂರು ಸೇಲಂಗೆ ಹೋದರೆಂದರೆ, ಆ ತಾತನೊಡನೆ ಇಂಡಿಯನ್ ಕಾಂಗ್ರೆಸ್ ಚಳುವಳಿಗಳಲ್ಲಿ ಇಳಿದು ಬಿಡುತ್ತಿದ್ದರು. ತಮಿಳು ಪತ್ರಿಕೆಗಳಲ್ಲಿ ವಾಂಚಿನಾಥರಂಥಾ ಸ್ವಾತಂತ್ರ ಯೋಧರ ತ್ಯಾಗವನ್ನು ಕುರಿತೂ ಬರೆದಿದ್ದರು.

1934ರಲ್ಲಿ ಇವರ 'ಸುಶೀಲೆ ಅಥವಾ ಶಿಶುಸಂರಕ್ಷಣ' ಎಂಬ ಕಿರುಕಾದಂಬರಿ ಹೊರಬಂತು. ಶಿಶುಸಂರಕ್ಷಣೆಯ ಆರೋಗ್ಯಕರ ವಿಧಾನಗಳನ್ನು, ವೈಜ್ಞಾನಿಕ ಮಾಹಿತಿಗಳನ್ನು, ಸರಳ ಭಾಷೆಯಲ್ಲಿ, ಸರಾಗ ಸಂಭಾಷಣೆಯಲ್ಲಿ, ಕತೆಯಾಗಿ ಹೆಣೆದ ಬಗೆ ಆಕರ್ಷಕವಾಗಿತ್ತು. ಇಂಥಾ ವಿಷಯಗಳ ಹೆಚ್ಚಿನ ಪ್ರಸಾರಕ್ಕೆ ಸಹಾಯಕವಾಯಿತು. ಈ ಪುಸ್ತಕವನ್ನು ಮೈಸೂರು ರಾಜ್ಯದ 'ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ' ಪ್ರಕಟಿಸಿತು.

ಇವರ ಕತೆ–ಕಾದಂಬರಿಗಳ ಸರಳತೆ, ನೇರತೆ ಅವರಿಗೆ ಬಹಳಷ್ಟು ಓದುಗರನ್ನು ಗಳಿಸಿಕೊಟ್ಟಿದ್ದರೆ ಅಚ್ಚರಿಯಲ್ಲ. ಇವರ ಪ್ರೇಮಕತೆಗಳಲ್ಲೂ ಸ್ತ್ರೀಯರ, ಸಮಾಜದ ಸುಧಾರಣೆಯ ಕನಸಿದೆ. 'ಕುಮುದಿನೀ, ಕೃಪಾಶಂಕರ' ಸಣ್ಣ ಕಾದಂಬರಿಯಲ್ಲಿ ತಂದೆ ಸತ್ತ ಕೂಸು ಕೃಪಾಶಂಕರನನ್ನು ಸುಶೀಲಮ್ಮ ಅತಿ ಕಷ್ಟದಿಂದ ಬೆಳೆಸುತ್ತಾಳೆ. ಶ್ರೀಮಂತರ ಮನೆಯೊಂದರಲ್ಲಿ ವಾರಾನ್ನ ಉಂಡು ಓದುವ ಕೃಪಾಶಂಕರನಲ್ಲಿ ಪ್ರೀತಿ ಇಟ್ಟು ವಿವಾಹವಾಗುವ

ಆ ಮನೆಯ ಹುಡುಗಿ ಕುಮುದಿನೀ. ಕತೆಯ ಕೆಲವು ಸೂಕ್ಷ್ಮಗಳು ಗಮನ ಸೆಳೆಯುತ್ತವೆ. ಕತೆಯಲ್ಲಿ ಕುಮುದಿನಿ ಕೃಪಾಶಂಕರನಿಗೆ 'ಸೋದರ' ಎಂದು ಆರಂಭಿಸಿ ಪತ್ರ ಬರೆಯುತ್ತಾಳೆ. ಆಕಾಲದ ಸಂಪ್ರದಾಯಸ್ಥ ಪರಿಸರದಲ್ಲಿ ಹೆಣ್ಣೊಂದು ಗಂಡಿಗೆ ಪತ್ರ ಬರೆಯಲು 'ಸೋದರ' ಪದದ ಸುರಕ್ಷಣೆ ಪಡೆದರೂ, ಕಡೆಗೆ ದುಷ್ಟನ ಕೂಡ ತನ್ನ ವಿವಾಹವೇರ್ಪಟ್ಟ ಸಂದರ್ಭ ಬಂದಾಗ ಮನೆಯಿಂದ ಓಡಿ ಬಂದು ಕೃಪಾಶಂಕರನನ್ನು ಸೇರಿ ತನ್ನ ಪ್ರೀತಿಯನ್ನು ಅರುಹಿ ವಿವಾಹವಾಗುವ ದಿಟ್ಟೆ ಕುಮುದಿನಿ. ಜಯಲಕ್ಷ್ಮಿಯವರ ಮಹಿಳಾ ಪ್ರಗತಿಯ ಕನಸುಗಳು ಅವರ ಬರಹಗಳಲ್ಲಿ ವಾಚ್ಯವಾಗಿಯಾದರೂ ಅಭಿವ್ಯಕ್ತಗೊಳ್ಳುತ್ತಿದ್ದವು. 'ಕುಮುದಿನಿಯು ತನ್ನ ಪತಿಯು ವರ್ಗವಾಗಿ ಹೋಗುವ ಸ್ಥಳಗಳಲ್ಲೆಲ್ಲಾ ಸ್ತ್ರೀಯರ ಉನ್ನತಿಗಾಗಿ ಅನೇಕ ಒಳ್ಳೆಯ ಕೆಲಸಗಳನ್ನು ಮಾಡುತ್ತಿದ್ದಳಲ್ಲದೆ, ಅಲ್ಲಲ್ಲಿ ಸ್ತ್ರೀಸೇವಾ ಸಂಘಗಳು, ಹೆಣ್ಣು ಹುಡುಗಿಯರ ಪಾಠಶಾಲೆಗಳು, ಸ್ತ್ರೀಯರ ಪರಸ್ಪರ ಸಹಾಯ ಸಂಘಗಳು, ಮುಂತಾದುವುಗಳನ್ನೂ ನಿಯಮಿಸುತ್ತಿದ್ದಳು'. ಎಂದು ಈ ಕಿರು ಕಾದಂಬರಿ ಕೊನೆಗೊಳ್ಳುತ್ತದೆ.

ವೈಯಕ್ತಿಕ ಬದುಕಿನಲ್ಲೂ ಜಯಲಕ್ಷ್ಮಿಯವರು ಮಹಿಳಾ ಶಿಕ್ಷಣ, ಪ್ರಗತಿಯನ್ನು ಕುರಿತಂತೆ ಕಳಕಳಿ ಇದ್ದವರು. ಜಯಲಕ್ಷ್ಮಿಯವರೂ, ಪತಿಗೆ ವರ್ಗವಾಗಿ ಹೋದ ಕಡೆಯಲ್ಲೆಲ್ಲಾ, ಶಿವಮೊಗ್ಗ, ಸಾಗರ, ತುಮಕೂರು, ಚಿಕ್ಕಮಗಳೂರು, ನಂಜನಗೂಡು, ಹೀಗೆ ಹಲವಾರು ಊರುಗಳಲ್ಲಿ ಮಹಿಳಾ ಸಮಾಜಗಳನ್ನು ನಡೆಸಿದರು. ಮಹಿಳೆಯರ ಪ್ರತಿಭೆಗೆ ಪ್ರೋತ್ಸಾಹ ಕೊಟ್ಟರು. ಮನೆಯಲ್ಲೇ ಕುಳಿತ ಮಹಿಳೆಯರಿಗೆ ಹೊರಬರುವ, ಒಂದೆಡೆ ಸೇರುವ, ಪರಸ್ಪರ ಹಂಚಿಕೊಳ್ಳುವ, ಹೊಸತನ್ನು ಕಲಿಯುವ ಅವಕಾಶ ಮಾಡಿಕೊಟ್ಟರು. ಆಗಾಗ್ಗೆ ಕರಕುಶಲ ಕಲೆಗಳ ವಸ್ತುಪ್ರದರ್ಶನ–ಮಾರಾಟವನ್ನೂ ಏರ್ಪಡಿಸುತ್ತಿದ್ದರು.

ಅನೇಕ ಕೃತಿಗಳನ್ನು ಅನುವಾದಿಸಿರುವ ಜಯಲಕ್ಷ್ಮಿಯವರು ನಾಡಿನ ಶ್ರೇಷ್ಠ ಮಹಿಳೆಯರ ಜೀವನ ಚರಿತ್ರೆಯನ್ನು ಪರಿಚಯಿಸುವ ಸಲುವಾಗಿ ಕಲ್ಕತ್ತೆಯ ಸಮಾಜ ಸುಧಾರಕಿ ಸರೋಜ ನಳಿನೀದತ್‌ರವರ ಜೀವನ ಚರಿತ್ರೆ

### ಜಯಲಕ್ಷ್ಮಿಯವರ ಸ್ವತಂತ್ರ ಕೃತಿಗಳು

ಕಾದಂಬರಿ :

| | |
|---|---|
| ಗ್ರಾಮೋದ್ಧಾರಕ ರಾಮಚಂದ್ರ | 1929 |
| ಸುಶೀಲೆ ಅಥವಾ ಶಿಶುಸಂರಕ್ಷಣೆ | 1934 |
| ಪರಿಮಳೆ ಮತ್ತು ಸುಲೋಚನ | 1935 |
| ಕುಮುದಿನಿ–ಕೃಪಾಶಂಕರ | 1936 |
| ಪುಷ್ಪಹಾರ | 1950 |
| ಪರಿಣಯ | 1952 |

ಸಣ್ಣ ಕಥಾ ಸಂಕಲನ :

| | |
|---|---|
| ಮೊಗ್ಗು | 1942 |
| ಪ್ರತಿಫಲ | 1944 |
| ದೀಪಾವಳಿ | 1945 |
| ಸುಂದರಿಯ ಹಂಬಲ | 1950 |
| ವಾತ್ಸಲ್ಯ | 1950 |
| ಮಿತವೇ ಹಿತ (ಸಣ್ಣ ನಾಟಕಗಳ ಸಂಗ್ರಹ) | 1984 |

ಅನುವಾದಿತ ಕೃತಿಗಳು :

| | |
|---|---|
| ಸರೋಜ ನಳಿನಿ | 1937 |
| ಕಲಾವಿದನ ತ್ಯಾಗ | 1942 |
| ಚಿನ್ನದ ಬಳೆ | 1946 |
| ಲೋಕಮಾತೆ ಬೇಡೆನ್ ಪೊವೆಲ್ | 1977 |

ಶಿಶು ಸಾಹಿತ್ಯ :

| | |
|---|---|
| ಮೂರು ಮುತ್ತುಗಳು | 1959 |
| ಮೋಹನ | 1963 |
| ಮಿಠಾಯಿ | 1974 |
| ಐಸ್‌ಕ್ರೀಮ್ | 1979 |
| ಪಂಚಾಮೃತ | 1984 |

ಅಕಾಡೆಮಿ ಪ್ರಶಸ್ತಿ ವಿಜೇತ ಕೃತಿ–1972
ವೈಭವದ ಮನೆ (ಗೃಹಾಲಂಕರಣ ಗ್ರಂಥ)

[ಜಯಲಕ್ಷ್ಮಿಯವರ ಈ ದೊಡ್ಡ ಪ್ರಮಾಣದ ಪ್ರಕಟಿತ ಕೃತಿಗಳು ಯಾರಲ್ಲಾದರೂ ಇದ್ದರೆ ದಯವಿಟ್ಟು ಅಚಲಾದ ವಿಳಾಸಕ್ಕೆ ಕಳಿಸಿಕೊಡಬೇಕೆಂದು ವಿನಂತಿಸುತ್ತೇವೆ. — ಸಂ.]

ಯನ್ನು ಆಂಗ್ಲ ಭಾಷೆಯಿಂದ ಕನ್ನಡಕ್ಕೆ ಅನುವಾದಿಸಿದರು. ಹಾಗೆಯೇ ಕನ್ನಡದ ಮಹಿಳೆಯರಾದ ಆರ್. ಕಲ್ಯಾಣಮ್ಮ, ಕೆ.ಡಿ. ರುಕ್ಮಿಣಿಯಮ್ಮ ಮುಂತಾದವರನ್ನು ತಮಿಳುಪತ್ರಿಕೆಗಳಿಗೆ ಪರಿಚಯ ಮಾಡಿಕೊಟ್ಟರು. ಕನ್ನಡದಿಂದ ತಮಿಳಿಗೆ, ತಮಿಳಿನಿಂದ ಕನ್ನಡಕ್ಕೆ ಅನೇಕ ಕೃತಿಗಳನ್ನು ಅನುವಾದಿಸಿದ್ದಾರೆ. ಮಾಸ್ತಿಯವರ 'ಸುಬ್ಬಣ್ಣ', ಅ. ನ. ಕೃ. ಅವರ 'ಸಂಧ್ಯಾರಾಗ', 'ಕಣ್ಣೀರು', 'ಮಂಗಳ ಸೂತ್ರ' ಹೀಗೆ ಹಲವು ಹತ್ತು ಕೃತಿಗಳನ್ನು ತಮಿಳಿಗೆ ಅನುವಾದಿಸಿದ್ದಾರೆ. ತಮಿಳಿನ ಡಾ॥ ಪರಸು ಬಾಲಕೃಷ್ಣನ್, ಡಾ॥ ಜಿ.ವಿ. ಜಗನ್ನಾಥನ್ ಕಲ್ಕಿ, ಶ್ರೀನಿವಾಸ ಶಾಸ್ತ್ರಿಗಳು, ಅನುತ್ತಮ, ಡಾ॥ ಲಕ್ಷ್ಮಿ ಗುಹಪ್ರಿಯೈ ಮುಂತಾದವರ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ತಮ್ಮದೇ ಕೆಲವು ಕೃತಿಗಳನ್ನು ಹಿಂದಿಗೂ ಭಾಷಾಂತರಿಸಿದ್ದಾರೆ.

ಪತ್ರಿಕೆಗಳಿಗೆ ಯಥೇಚ್ಛವಾಗಿ ಬರೆಯುತ್ತಿದ್ದ ಜಯಲಕ್ಷ್ಮಿ ಅವರು ಗೃಹನಿರ್ವಹಣೆ, ಅಡಿಗೆ ವಿಧಾನಗಳು, ಆರೋಗ್ಯ ಶಾಸ್ತ್ರ, ಮಕ್ಕಳ ಪೋಷಣೆ ಹೀಗೆ ಹಲವು ವಿಷಯಗಳನ್ನು ಕುರಿತು ಲೇಖನಗಳನ್ನು ಬರೆದವರು. ಹೊಸ ಬಗೆಯ ಅಡಿಗೆ ವಿಧಾನಗಳನ್ನು ಪ್ರಯೋಗಿಸಿ, ಪತ್ರಿಕೆಗಳಿಗೆ ಕಳುಹಿಸುವುದೂ ಅವರ ಹವ್ಯಾಸವಾಗಿತ್ತು. 1972ರಲ್ಲಿ ಪ್ರಕಟವಾದ ಇವರ 'ವೈಭವದ ಮನೆ' ಮನೆಯ ಒಪ್ಪ ಓರಣ, ಗೃಹಾಲಂಕಾರದೊಡನೆ ಕುಟುಂಬದ ಆರೋಗ್ಯ, ಆದಾಯ-ವ್ಯಯ, ಮನೆಯ ಯಂತ್ರಗಳು ಮುಂತಾದುವನ್ನೂ ವಿವರಿಸುತ್ತದೆ. ಜಯಲಕ್ಷ್ಮಿಯವರು ಯಾವುದೇ ವಿಷಯವನ್ನು 'ಪಠ್ಯಶೈಲಿಯಲ್ಲಿ ಹೇಳಿದರೆ ಓದುವುದಕ್ಕೆ ಬೇಸರವಾಗಬಹುದೆಂದು ಸಂಭಾಷಣೆಯ ಮೂಲಕ, ಹಗುರಾದ ಶೈಲಿಯಲ್ಲಿ ಬರೆವ ಕಲೆಯನ್ನು ರೂಢಿಸಿಕೊಂಡವರು. ಅವರ ಸಹಪಾಠಿ ಎಂ. ಆರ್. ಲಕ್ಷ್ಮಮ್ಮ 'ಜಯಲಕ್ಷ್ಮಿ ಸಾಂಪ್ರದಾಯಿಕ ಓದನ್ನು ಬಿಟ್ಟುಕೊಟ್ಟರೂ, ಬೇರೊಂದು ದಿಶೆಯಲ್ಲಿ ಅವರ ಅಧ್ಯಯನ, ಅಸ್ಥೆಯಿಂದ, ನಿಷ್ಠೆಯಿಂದ ಸಾಗಿತು. ಆ ಅಧ್ಯಯನದ ಫಲ-ಹಲವಾರು ಲೇಖನಗಳು, ಹಲವಾರು ಹೊತ್ತಿಗೆಗಳು' ಎಂದಿದ್ದಾರೆ. ಜಯಲಕ್ಷ್ಮಿಯವರ ಈ ಅಧ್ಯಯನದ ಆಸಕ್ತಿ, ವಿಷಯ ಪ್ರಧಾನ ಪುಸ್ತಕಗಳಲ್ಲಿ ಎದ್ದು ಕಾಣುತ್ತದೆ. ಇವರ 'ವೈಭವದ ಮನೆ'ಗೆ ಅಕಾಡೆಮಿಯ ಪ್ರಶಸ್ತಿ ಬಂದಿದೆ. ಮಕ್ಕಳಿಗಾಗಿಯೂ ಜಯಲಕ್ಷ್ಮಿಯವರು ಬರೆದಿದ್ದಾರೆ. ತಮಿಳಿನಲ್ಲಿಯೂ ಅನೇಕ ಕತೆ, ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. ಇಂಗ್ಲಿಷ್ ಹಾಗೂ ಹಿಂದಿ ಭಾಷೆಗಳಲ್ಲಿ ಲೇಖನಗಳನ್ನು ಪ್ರಕಟಿಸಿದ್ದಾರೆ. 1971ನೇ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಇವರಿಗೆ ಸಂದಿದೆ.

ಇಪ್ಪತ್ತರ ದಶಕದಲ್ಲೇ ಬರೆಯಲು ಆರಂಭಿಸಿದ ಜಯಲಕ್ಷ್ಮಿ ಅವರು, ಕನ್ನಡ ಹಾಗೂ ತಮಿಳು ಭಾಷೆಗಳಲ್ಲಿ ಯಥೇಚ್ಛವಾಗಿ ಬರೆದವರು, ಎರಡೂ ಭಾಷೆಗಳಿಗೆ ಭಾಷಾಂತರಿಸಿದವರು, ಎರಡೂ ಭಾಷೆಯ ಸಾಹಿತ್ಯವನ್ನು ಪರಸ್ಪರರಿಗೆ ಪರಿಚಯಿಸಿದವರು. ಸರಳ ಭಾಷೆಯ ಇವರ ಕೃತಿಗಳು ತಮ್ಮ ಉದ್ದೇಶದಲ್ಲಿ ಯಶಸ್ವಿಯಾದವು. ವಿಷಯ ಸಂಗ್ರಹ, ವಿಶದವಾದ ನಿರೂಪಣೆಗೆ ಉತ್ತಮ ಉದಾಹರಣೆಗಳಾಗಿವೆ.

---

ನಿಜವಾದ ನಿಷೇಧಗಳಲ್ಲಿ ವ್ಯಕ್ತಿಗಳನ್ನು ನಿರುತ್ತೇಜನಗೊಳಿಸುವ ಸಂಗತಿಗಳು ಅಷ್ಟಿಲ್ಲ. ಅದಕ್ಕಿಂತ ಹೆಚ್ಚು ಸೂಕ್ಷ್ಮವಾದ ನಿರುತ್ತೇಜನದ ವಿಧಾನಗಳುಂಟು. ವ್ಯಂಗ್ಯ ನಗೆ, ಭುಜ ಹಾರಿಸುವುದು 'ಸ್ತ್ರೀ ವಿದ್ವಾಂಸ'ಳೆಂದು ಗೇಲಿ ಮಾಡುವುದು ಸಂಪೂರ್ಣ ಸ್ತ್ರೀದ್ವೇಷಿ ಧೋರಣೆಯಿಂದ ವ್ಯಕ್ತಪಡಿಸುವ ತಿರಸ್ಕಾರ ಇಲ್ಲವೆ ಪುರುಷರ ಶ್ರೇಷ್ಠತೆಯನ್ನು ತೀರ ಸಹಜವೆಂಬಂತೆ ಭಾವಿಸಿಕೊಳ್ಳುವುದು ಎರಡೂ ಲಿಂಗಜಾತಿಯ ನಡುವಿನ ಸಾಮರ್ಥ್ಯ, ರೂಪಲಕ್ಷಣಗಳಲ್ಲಿನ ವೈರುಧ್ಯಗಳಿಗೆ ತೀರಾ ಒತ್ತುಕೊಡುವುದು ಅಥವಾ ಅಸಹಾಯಕರಾಗಿ ಪುರುಷರೊಂದಿಗೆ ಸ್ಪರ್ಧಿಸಹೊರಟ 'ಬಡ ಚಿಕ್ಕ ಹುಡುಗಿಯರ' ಬಗ್ಗೆ ಅನುಗ್ರಾಹಕ ಅನುಕಂಪ ಸೂಚಿಸುವುದು ಇವೆಲ್ಲ ಇದೇ ವಿಧಾನಗಳು.

— ವಯೋಲಾಕ್ಲೈನ್

# ಮತಾಂಧರ ಜಡ್ಡು ವ್ಯವಸ್ಥೆಯಲ್ಲಿ ಮಹಿಳೆ

— ಜಿ. ರಾಮಕೃಷ್ಣ

ಈಚಿನ ವರ್ಷಗಳವರೆಗೂ ಒಂದಾಗಿದ್ದ ಯುಗೋಸ್ಲಾವಿಯಾ ಒಡೆದು ಹೋಳಾದ ನಂತರ ಅಲ್ಲಿ ಧಾರ್ಮಿಕ ನಂಬಿಕೆಗಳ ಭಿನ್ನತೆಯಿಂದಾಗಿ ಮಾರಾಮಾರಿ ಆರಂಭವಾಗಿದ್ದು ಇನ್ನೂ ಕೊನೆಯಾಗುವ ಸೂಚನೆಗಳಿಲ್ಲ. ಕ್ರೊಯೇಶಿಯ, ಬೋಸ್ನಿಯ, ಸರ್ಬಿಯ, ಇತ್ಯಾದಿ ಪ್ರಾಂತ್ಯಗಳಲ್ಲಿ ಅಂತರ್ಯುದ್ಧವು ಹಲವರನ್ನು ಆಹುತಿ ತೆಗೆದುಕೊಂಡಿದೆ, ಆಸ್ತಿಪಾಸ್ತಿ ಸುಟ್ಟು ಬೂದಿಯಾಗಿದೆ, ಹೆಂಗಸರು–ಮಕ್ಕಳು ಎನ್ನದೆ ಎಲ್ಲರ ಮೇಲೂ ಅಮಾನುಷ ಹಲ್ಲೆ ನಡೆದಿದೆ. "ಸಮಾಜವಾದದ ಬಂಧನದಿಂದ" ವಿಮುಕ್ತರಾದವರ ನವನಾಗರಿಕತೆ, ಸ್ವಾತಂತ್ರ್ಯ, ಮಾನವೀಯ ಹಕ್ಕುಗಳು ಇವನ್ನೆಲ್ಲಾ ವಿಜೃಂಭಣೆಯ ಹಂತದಲ್ಲಿ ನೋಡಲು ಅಲ್ಲಿಗೆ ಹೋಗಬೇಕೋ ಏನೋ !

ಬೋಸ್ನಿಯ–ಹರ್ಜಗೋವಿನ ಪ್ರಾಂತ್ಯದಲ್ಲಿ ಮಹಿಳೆಯರ ಮೇಲೆ ನಡೆದಿರುವ ದೌರ್ಜನ್ಯಗಳಿಗೆ ಲೆಕ್ಕವಿಲ್ಲ. ಎಷ್ಟೋ ಮಂದಿ ನರ–ರಾಕ್ಷಸರ ಲೈಂಗಿಕ ಬೀಭತ್ಸತೆಗೆ ಚಿಕ್ಕವರು ಮತ್ತು ದೊಡ್ಡವರು ಗುರಿಯಾಗಿದ್ದಾರೆ. ಇಂತಹವರನ್ನುದ್ದೇಶಿಸಿ ರೋಮನ್ ಕ್ಯಾಥೊಲಿಕ್ ಚರ್ಚಿನ ಮಹಾಗುರು ಪೋಪ್ ಪಾಲ್ ಒಂದು ಧಾರ್ಮಿಕ-ನೈತಿಕ ಕರೆ ನೀಡಿದ್ದು ಇದೇ ಮಾರ್ಚ್ ತಿಂಗಳಲ್ಲಿ ವರದಿಯಾಗಿತ್ತು. ಆ ಕರೆಯ ಹಿಂದೆ ಸಾಂತ್ವನದ ಭಾವವಿದೆಯೋ ಕ್ರೌರ್ಯ ಮತ್ತು ಮೌಢ್ಯಗಳ ಪರಾಕಾಷ್ಠೆ ಇದೆಯೋ ನಾವು ತೀರ್ಮಾನಿಸಬೇಕು ಮತ್ತು ಅದರಿಂದ ಸೂಕ್ತ ಮಾರ್ಗದರ್ಶನ ಪಡೆಯಬೇಕು. ಮಹಾಗುರುಗಳು ಹೇಳಿದ್ದಿದು : "ಯುದ್ಧದ ಈ ಕೆಟ್ಟ ಸನ್ನಿವೇಶದಲ್ಲಿ ಅನೈತಿಕ ಕಾರ್ಯಾಚರಣೆಗಳು ನಡೆದಿವೆ. ಮಹಿಳೆಯರ ಮೇಲೆ ಅತ್ಯಾಚಾರ ನಡೆದಿದೆ. ಆದರೆ ಅವರಿಗೆ ನಾನು ಎಚ್ಚರವಿರಬೇಕೆಂದು ನಿರ್ದೇಶಿಸುತ್ತಿದ್ದೇನೆ. ಅವರು ಯಾರೂ ಈ ಅತ್ಯಾಚಾರದಿಂದಾಗಿ ಗರ್ಭಪಾತ ಮಾಡಿಸಿಕೊಳ್ಳಕೂಡದು."

ಇದು ಬದುಕಿರುವ ಮತ್ತು ಬದುಕಿಗೆ ಬರಲಿರುವವರ ಬಗ್ಗೆ ಪ್ರೀತಿಯೋ ಅಥವಾ ಡಾಂಭಿಕ ಅಧಿಕಾರದ ಕುರುಹೋ ತಿಳಿಯುವುದಿಲ್ಲ. ಅಂತರ್ಯುದ್ಧಕ್ಕೆ ಪ್ರೇರಣೆ ನೀಡಿದವರ ಬಗ್ಗೆ ಒಂದು ಖಂಡನೆಯ–ಮಾತಿಲ್ಲ, ಸೌಹಾರ್ದತೆಗಾಗಿ ಏನು ಕ್ರಮ ಕೈಗೊಳ್ಳಬೇಕೆಂಬ ಸೂಚನೆ ಇಲ್ಲ, ದೌರ್ಜನ್ಯಕ್ಕೊಳಗಾಗುವವರ ಪರವಾದ ಒಂದು ಸೌಜನ್ಯದ ಕ್ರಿಯೆಯಿಲ್ಲ, ಕೇವಲ ಅರ್ಥರಹಿತ ದರ್ಪದ ಧಾರ್ಮಿಕ ನಿರ್ದೇಶನ ಮಾತ್ರ ಇಲ್ಲಿದೆ. ಇವರು ಮಹಾತ್ಮ ಜೀಸಸ್ ಕ್ರೈಸ್ಟ್‌ನ ಸಂಪ್ರದಾಯದವರಂತೆ !

## ಒಂದು ಚಿಂತನೆ

ಆತನ ಹೃದಯವಂತಿಕೆಯ ಲವಲೇಶವೂ ಇಲ್ಲದ ಈ ಧರ್ಮಗುರುಗಳು ಮಹಿಳೆಯ ಸ್ಥಾನ ಮತ್ತು ಕರ್ತವ್ಯದ ಬಗ್ಗೆ ಉದ್ಗರಿಸುವುದು ತಲೆತಗ್ಗಿಸುವ ಪ್ರಸಂಗ. ಈ ಗುರುಗಳ ಆಣತಿಯಂತೆಯೇ ಹಲ್ಲೆಗೊಳಗಾದ ಮಹಿಳೆ ನಡೆದುಕೊಳ್ಳುತ್ತಾಳೆಂದು ಭ್ರಮಿಸುವುದು ಬೇಡ.

ಆ ಧರ್ಮಗುರುವನ್ನು ಮೀರಿಸುವ ಧರ್ಮಗುರುಗಳು ಇಂದಿನ ಭಾರತದಲ್ಲಿ ಆಡಳಿತ ಸೂತ್ರ ತಮ್ಮ ಕೈಗೆ ತೆಗೆದುಕೊಳ್ಳಲು ಶ್ರೀ ರಾಮಚಂದ್ರನ ಕೃಪೆಯನ್ನು ಬಯಸುತ್ತಿದ್ದಾರೆ. ಅವರು ತಮ್ಮದೇ ಆದ ಒಂದು ಧರ್ಮ ಸಂಸತ್ತನ್ನು ಸ್ಥಾಪಿಸಿಕೊಂಡಿದ್ದಾರೆ. ಮುಂದಿನ ದಿನಗಳಲ್ಲಿ ಈ ಸಂಸತ್ತೇ ನಮಗೆ ಸಂವಿಧಾನವನ್ನು ರೂಪಿಸಿಕೊಡುತ್ತದಂತೆ ! ಮಹಿಳೆಯರು ಮತ್ತು ಮಹಿಳಾ ಸ್ವಾತಂತ್ರ್ಯದ ಅಭೀಪ್ಸೆ ಇರುವವರು ಇದನ್ನು ವಿಶೇಷವಾಗಿ ಗಮನಿಸಬೇಕು. ಏಕೆಂದರೆ ಈ ಧರ್ಮ ಸಂಸತ್ತು ಮನುಸಂಹಿತೆಯ ಮಾದರಿ ಇಟ್ಟುಕೊಂಡು ನಾಗರಿಕ ಕಾಯಿದೆಗಳನ್ನು ರೂಪಿಸುತ್ತದಂತೆ. ಉಮಾ ಭಾರತಿ, ಗ್ವಾಲಿಯರ್ ಮಾತೆ, ಸಾಧ್ವಿ ಋತಂಭರಾ,

ಇತ್ಯಾದಿಗಳನ್ನು ಬಿಟ್ಟು ಬೇರೆ ಮಹಿಳೆಯರು ಸಂಸತ್ತಿನ ಆದೇಶದಂತೆ ಮನೆಗಳಲ್ಲಿ ಸೀತೆ-ಸಾವಿತ್ರಿಯರಂತೆ ಕಂಗೊಳಿಸಿ, ಮಕ್ಕಳನ್ನು ಹೆತ್ತು (ಸಾವಿತ್ರಿಗೆ ಎಷ್ಟು ಮಕ್ಕಳೋ ಪ್ರಸ್ತುತ ಲೇಖಕನಿಗೆ ಗೊತ್ತಿಲ್ಲ) ಅಡಿಗೆ ಮನೆಯನ್ನು ಶೃಂಗರಿಸಿ, ಪತಿಸೇವಾಪರಾಯಣರಾಗಿ ಭಾರತೀಯ ಸಂಸ್ಕೃತಿಯನ್ನು ಎತ್ತಿ ಹಿಡಿಯಬೇಕಂತೆ. ಇದಕ್ಕೆ ಶ್ರೀರಾಮಚಂದ್ರನೇ ಸ್ವತಃ ಪ್ರೇರಣೆ ನೀಡುತ್ತಾನಂತೆ !

ಧಾರ್ಮಿಕ ಮೂಲಭೂತವಾದಿತನವು ಎಲ್ಲ ಕ್ಷೇತ್ರಗಳನ್ನೂ ಆವರಿಸಿ ಪಿಡುಗನ್ನು ಸಾರ್ವತ್ರಿಕಗೊಳಿಸುತ್ತದೆ. ಅದು ಯಾವ ಧರ್ಮದ ಮೌಢ್ಯವೆಂದು ಭಿನ್ನೈಸಬೇಕಾಗಿಲ್ಲ ಏಕೆಂದರೆ ಅವುಗಳ ಲಕ್ಷಣ ಸಮಾನವಾದದ್ದು. ಮೇಲು-ಕೀಳು ಎಂಬುದಕ್ಕೆ ಧರ್ಮಶಾಸ್ತ್ರದ ಬೆಂಬಲ ಪಡೆಯುವುದು ಆ ಶ್ರೇಣೀಕೃತ ಸಮಾಜವನ್ನು ಹಸನುಗೊಳಿಸುವುದಿಲ್ಲ. ಏಕೆ ಆತ ಮೇಲು, ಈಕೆ ಕೀಳು ಎಂಬ ಪ್ರಶ್ನೆ ಮೂಲಭೂತವಾದಿತನದ ಮುಂದೆ ಅಪ್ರಸ್ತುತ !

ಧರ್ಮಸಂಸತ್ತಿನ ಮಾಫಿಯಾ – ಗುರುಗಳಿಗೆ ಸಮರ್ಥನೆ ನೀಡುವ ರೀತಿಯಲ್ಲಿ ರಾಷ್ಟ್ರದ ಅಧಿಕಾರಕ್ಕೆ ತಾನೂ ಅರ್ಹವೆಂದು ಘೋಷಿಸಿಕೊಂಡಿರುವ ಒಂದು ರಾಜಕೀಯ ಪಕ್ಷವಾದ "ಭಾರತೀಯ ಜನತಾ ಪಕ್ಷ" ಕೆಲಸ ಮಾಡುತ್ತಿದೆ. ಹಿನ್ನೆಡೆಯಿಂದ ಮುನ್ನಡೆ ಸಾಧಿಸಬಹುದೆಂದು ನಂಬಿರುವ ಈ ಪಕ್ಷ ತನ್ನದೇ ಪಕ್ಷದ ಮಹಿಳಾ ವಿಭಾಗವೊಂದನ್ನಿಟ್ಟುಕೊಂಡಿದೆ. ಅದರ ಅಧ್ಯಕ್ಷೆ ಅದೆಂಥದ್ದೋ ಸಿಹ್ನ ಎಂಬಾಕೆ. ಅವರು ಈಚೆಗೆ ಮಾತಿನ ಮುತ್ತು ಉದುರಿಸಿದ್ದಾರೆ. ('ಸುಧಾ' ವಾರ ಪತ್ರಿಕೆಯಲ್ಲಿ ಆ ಮುತ್ತುಗಳಲ್ಲಿ ಕೆಲವನ್ನು ಹಿಡಿದಿಡಲಾಗಿತ್ತು) ಅವರ ಪ್ರಕಾರ ಹೆಣ್ಣಿನ ಅಸಹನೆಯು ಗಂಡಿನ ದರ್ಪಕ್ಕೆ ಕಾರಣವಂತೆ. ಮಹಿಳೆಯು ಪುರುಷನನ್ನು ಸರಿಯಾಗಿ ಅರ್ಥ ಮಾಡಿಕೊಂಡು ಜಾಣ್ಮೆ-ತಾಳ್ಮೆಗಳಿಂದ ವರ್ತಿಸಿದರೆ ಎಲ್ಲಾ ಸುಸೂತ್ರವಾಗಿ ನಡೆಯುತ್ತದಂತೆ. ಹೆಣ್ಣು ತನಗೆ ತಾನೇ ಮಾರಕವಾಗುವಂತೆ ಅನ್ಯದೇಶಗಳಿಂದ ಅನಿಷ್ಟವಾದ ಭಾವನೆಗಳನ್ನು ಎರವಲು ಪಡೆದುಕೊಂಡಿದ್ದಾಳಂತೆ ಇತ್ಯಾದಿ, ಇತ್ಯಾದಿ.

ಪೋಪ್–ಇಮಾಂ–ಧರ್ಮಸಂಸತ್ತು – ಭಾ.ಜ.ಪ. – ಮಹಿಳಾ ವಿಭಾಗದ ಅಧ್ಯಕ್ಷೆ ಸಿನ್ಹಾ, ಇವೆಲ್ಲಾ ಒಂದೇ ಕುಂಡಕ್ಕೆ ಸೇರಿದ ಜ್ವಾಲೆಗಳು. ಆ ಜ್ವಾಲೆಯಲ್ಲಿ ಸುಟ್ಟುಕೊಂಡು ಮಹಿಳೆ ಶುಭ್ರಳಾಗಬೇಕು, ಸುಸಂಸ್ಕೃತಳಾಗಬೇಕು. ಅಧೀನಳಾಗಿರುವಾಗ ಅವಳು ಅನುಭವಿಸುವ ಸ್ವಾತಂತ್ರ್ಯ ಅನನ್ಯವಾದುದು, ಎಂದು ಹೆಮ್ಮೆ ಪಡಬೇಕು.

ಮೂಲಭೂತವಾದಿತನವು ಯಾವ ಪ್ರಕಾರದ್ದೇ ಆಗಿರಲಿ ಅದರಲ್ಲಿ ಹಿಟ್ಲರನ ಆಕಾಂಕ್ಷೆ ತುಂಬಿರುತ್ತದೆ. ಅವನು ಜರ್ಮನಿಯ ಮಹಿಳೆಯರಿಗೆ ನೀಡಿದ ಉದಾತ್ತ ಸಂದೇಶವೆಂದರೆ ಮೂರು 'ಕೆ'ಗಳ ಪಾಲನೆ-ಪೋಷಣೆ, ಕರ್ಕ್ (ಚರ್ಚು–ಧರ್ಮಸಂಸ್ಥೆ), ಕಿಂದರ್ (ಮಕ್ಕಳನ್ನು ಹೆತ್ತು ರಾಷ್ಟ್ರವನ್ನು ಸಲಹುವುದು), ಮತ್ತು ಕಿಚನ್ (ಅಡಿಗೆ ಮನೆಯ ದಾಸ್ಯ). ಮುಂದೆ ಹೋಗುವುದು ಎಂದರೆ ಹಿಂದಕ್ಕೆ ಹೋಗುವುದು ಎಂಬುವವರಿಗೆ ಇದು ಮಾನ್ಯ.

---

ಒಮ್ಮೆ ಮಹಿಳೆಯರು ಪರಿಪೂರ್ಣ ಸಾಮರ್ಥ್ಯ ಬೆಳೆದ ವ್ಯಕ್ತಿಗಳಾದರೆಂದರೆ ಅವರು ಮತ್ತೆ ಅಧೀನತೆಗೆ ಹಿಂದಿರುಗುವುದು ಸಾಧ್ಯವಿಲ್ಲ. ಹಾಗೆ ಹಿಂದಿರುಗುವುದು ಸರಿಪಡಿಸಲು ಸಾಧ್ಯವಿಲ್ಲದಂತೆ ಮಾನವೀಯ ಮೌಲ್ಯದ ವಿನಾಶಕ್ಕೆ ಕಾರಣವಾಗುತ್ತದೆ. (ಬದಲಾದ ಮಹಿಳೆಯರ ಸ್ಥಿತಿಯಿಂದ ಹುಟ್ಟಿರುವ) ಸಮಸ್ಯೆಗೆ ಪರಿಹಾರ ಹುಡುಕ್ಕುವುದೆಂದರೆ ಸಾಮಾಜಿಕ ಬದಲಾವಣೆಗಳನ್ನೇ ಹಿಂದಕ್ಕೆಳೆಯುವುದಲ್ಲ. ಮನುಷ್ಯರ ಬದಲಾದ ಪರಿಸ್ಥಿತಿಗಳಿಗೆ ತಕ್ಕಂತೆ ಅವರ ಆರ್ಥಿಕ ಅವಶ್ಯಕತೆಗಳನ್ನು ಹೇಗೋ ಹಾಗೆಯೇ ಭಾವನಾತ್ಮಕ ಅವಶ್ಯಕತೆಗಳನ್ನೂ ಸಂತೃಪ್ತಿಗೊಳಿಸಬಲ್ಲ ರೀತಿಯಲ್ಲಿ ಸಾಮಾಜಿಕ ರಚನೆಯಲ್ಲಿ ಹೊಸ ಹೊಂದಾಣಿಕೆಯ ವಿಧಾನಗಳನ್ನು ಕಂಡು ಹಿಡಿಯುವುದು ಮತ್ತು ಸಾಮಾಜಿಕ ಬದುಕನ್ನು ಮತ್ತೆ ರಚಿಸುವುದೇ ಇದಕ್ಕೆ ಪರಿಹಾರ.

**— ವಯೋಲಾ ಕ್ಲೈನ್**

# ಸಿಂಡ್ರೆಲ್ಲಾ ಕಾಂಪ್ಲೆಕ್ಸ್

— ಚಂದ್ರ

"ನನಗೆ ಆಗ 35 ವರ್ಷ. ಬದುಕಿನ ಅನಿರೀಕ್ಷಿತಗಳು ಥಟ್ಟನೆ ನನ್ನೊಳಗಿನ ಅಮಾಯಕತೆಯನ್ನೂ, ಅಸಹಾಯಕತೆಯನ್ನು ಹೊರಗಟ್ಟಿದವು. ವಿವಾಹದಾಚೆ ನಿಂತು ಹಲವು ವರ್ಷಗಳೇ ಕಳೆದಿತ್ತು. ಮೂವರು ಚಿಕ್ಕ ಮಕ್ಕಳ ಜವಾಬ್ದಾರಿ ಹೊತ್ತ ನನ್ನನ್ನು ಬದುಕಿನ ಅನಿವಾರ್ಯತೆಗಳು ಧಿಡೀರನೆ ಬೆಳೆಸಿದ್ದವು. ನನ್ನೊಳಗಿನ ನನಗೇ ಅರಿವಿಲ್ಲದ ಶಕ್ತಿ ಸಾಮರ್ಥ್ಯಗಳನ್ನು ಕಂಡುಕೊಳ್ಳಲು ಸಾಧ್ಯವಾಗಿತ್ತು. ನನ್ನ ವಿವಾಹವಾದ ಕೆಲವರ್ಷದಲ್ಲೇ ನನ್ನ ಪತಿ ಮಾನಸಿಕ ರೋಗಕ್ಕೀಡಾಗಿ, ಪದೇ ಪದೇ ಆಸ್ಪತ್ರೆಗೆ ಸೇರಿಸಬೇಕಾಗುತ್ತಿತ್ತು. ರೋಗದ ನಡುವಿನ ದಿನಗಳಲ್ಲಿ ಆತ ಸಣ್ಣ ಪುಟ್ಟ ಕೆಲಸಗಳನ್ನು ಹಿಡಿಯುತ್ತಿದ್ದರೂ, ಉಳಿದಂತೆ ಮನೆ, ಮಕ್ಕಳೊಂದಿಗೆ ಆತನ ಸಂಪೂರ್ಣ ಹೊಣೆ ನನ್ನ ಮೇಲಿತ್ತು. ನನ್ನ ಬಗ್ಗೆ ನನಗೇ ತೀವ್ರ ಅನುಕಂಪ ಮೂಡಿದ ದಿನಗಳವು. ಒಂದು ವರ್ಷ, ಕೇವಲ ಒಂದು ವರ್ಷ 'ಮಡದಿ'ಯ ಸುಭದ್ರದ ಸುಖೀ ಜೀವನವನ್ನು ಅನುಭವಿಸಿದ್ದೆ. ಮತ್ತೆ ಕೆಲವೇ ವರ್ಷಗಳು, ಮೂವರು ಮಕ್ಕಳ ಏಕಾಂಗಿ ತಾಯಿ ನಾನು. ನನ್ನ ಮೇಲೆ ಅವಲಂಬಿತ ಸಣ್ಣ ಮಕ್ಕಳು, ರೋಗಿಷ್ಠ ಗಂಡ ! ಬದುಕು ನನಗೆಲ್ಲಿ ಸ್ವಾವಲಂಬನೆಯನ್ನು ಕಲಿಸಿತ್ತು ?

ಇದೀಗ ದುಡಿವ, ಹಣ ಗಳಿಸುವ ಅನಿವಾರ್ಯವಿತ್ತು. ನನಗೆ ತಿಳಿದಿದ್ದ ಒಂದೇ ಕಲೆ, ಬರೆಯುವುದು. ಅದನ್ನೇ ಬಂಡವಾಳವಾಗಿಸಿ ಬದುಕಹೊರಟೆ. ಎದುರು ನಿಂತ ಸವಾಲುಗಳ ಎದುರಿಸುವ ದಿಟ್ಟತನ, ಛಲ ಮೂಡಿತು. ಬರಹದಲ್ಲಿ ಮುಂದುವರೆದೆ. ಗಂಟೆಗಟ್ಟಲೆ ಕೂತು ಬರೆದೆ, ಒಂದರ ಹಿಂದೊಂದು ಬರೆದೆ. ಸಂಪಾದಕರ, ಪ್ರಕಾಶಕರ ಸಮಯದ ಗಡುವನ್ನು ದಾಟದೆ ಬರೆದೇ ಬರೆದೆ.

ಒಂಭತ್ತು ವರ್ಷಗಳ ಅನಾರೋಗ್ಯದ ನಂತರ ನನ್ನ ಗಂಡ ತೀರಿಕೊಂಡ. 1975, ನಾಲ್ಕು ವರ್ಷಗಳ ಏಕಾಂಗಿ ಹೋರಾಟದ ನಂತರ, ಮಕ್ಕಳನ್ನು ಕಟ್ಟಿಕೊಂಡು ನ್ಯೂಯಾರ್ಕ್ ತೊರೆದು, ಹಡ್ಸನ್ ಕಣಿವೆಗೆ ಬಂದೆ. ನನ್ನ ಕನಸಿನ ಸಂಗಾತಿ ಮತ್ತೆ ಸಿಕ್ಕಿದ್ದ—ಆತ ಲೊವೆಲ್. ವಿಶಾಲವಾದ ಮನೆ, ಹೂತೋಟ. ಇದೀಗ ನನ್ನ ಬರವಣಿಗೆ ಮುಂದುವರೆಸುವುದು ಕಷ್ಟವೇ ಇರಲಿಲ್ಲ.

ಆದರೆ ಹಾಗಾಗಲಿಲ್ಲ. ತಟ್ಟನೆ ನಾ ಬದಲಾಗಿದ್ದೆ. ಒರಗಲೊಂದು ಹೆಗಲು ದೊರೆತೊಡನೆ, ತಲೆಯಾಣಿಸಲು ಗಂಡಿನ ಆಸರೆ ಸಿಕ್ಕೊಡನೆ ನನ್ನ ಮಹತ್ವಾಕಾಂಕ್ಷೆಗಳೆಲ್ಲ ಜರ್ರನೆ ಜಾರಿದ್ದವು. ಯಾವುದೇ ಪ್ರಜ್ಞಾಪೂರ್ವಕ ನಿರ್ಧಾರವಿಲ್ಲದೆಯೇ ನನ್ನ ಬದುಕು ದಿಢೀರನೆ ಬದಲಾಯಿತು. ಇದೀಗ ಗಂಟೆಗಟ್ಟಲೆ ರುಚಿ ರುಚಿಯಾಗಿ ಭಕ್ಷ್ಯಗಳನ್ನು ತಯಾರಿಸುವುದೇ ಕೆಲಸವಾಯಿತು. ಇಲ್ಲಿಗೆ ಬಂದ ಆರು ತಿಂಗಳಲ್ಲಿ ಹತ್ತು ಪೌಂಡ್ ತೂಕ ಏರಿದ್ದೆ ! ಮನೆಯ ಸಣ್ಣ ಪುಟ್ಟ ಕೆಲಸಗಳಲ್ಲಿ ಗಂಟೆಗಟ್ಟಲೆ ತೊಡಗಿದೆ. ರಾತ್ರಿ ನಿದ್ರೆಯಲ್ಲಿ ಕನಸುಗಳಿರಲಿಲ್ಲ. ಬೆಳಿಗ್ಗೆ ಏಳುವುದಕ್ಕೂ ಆಲಸ್ಯ. ಏಳಲೇ ಬೇಕೆಂದು ಒತ್ತಾಯಿಸುವ ಕೆಲಸಗಳಿರಲಿಲ್ಲ.

## ಒಂದು ಪರಿಚಯ

ನನ್ನ ಈ ವರ್ತನೆ ನನ್ನನ್ನು ಕ್ಷೋಭೆಗೊಳಿಸಬೇಕಿತ್ತು. ನನ್ನನ್ನು ನಾನು ಆರ್ಥಿಕವಾಗಿ ನೋಡಿಕೊಳ್ಳಬಲ್ಲ ಸಾಮರ್ಥ್ಯ ನನ್ನಲ್ಲಿತ್ತು. ಕಳೆದ ಎಷ್ಟೋ ವರ್ಷಗಳು ನನ್ನ ಕಾಲ ಮೇಲೆ ನಾನು ನಿಂತವಳು ಥಟ್ಟನೆ 'ಪ್ಯಾರಲೈಸ್' ಆಗಿದ್ದೆ. ಮನೆ ವೆಚ್ಚ, ಬಾಡಿಗೆ, ನೂರೆಂಟು ಬಿಲ್ಲುಗಳು, ಆಸ್ಪತ್ರೆ ಖರ್ಚು ಎಲ್ಲವನ್ನೂ ವರ್ಷಗಟ್ಟಲೆ ನಿಭಾಯಿಸಿದ್ದ ನನಗೆ ಈಗ, ನನ್ನ ಸಾಮರ್ಥ್ಯದ ಬಗ್ಗೆ ಅನುಮಾನಗಳೆದ್ದವು. ಹೆಣ್ಣು ಮಕ್ಕಳಿಗೆ ಅವರ ಯೋಗ್ಯತೆಯ ಅರಿವೆನ್ನೆಲ್ಲಿ ಮೂಡಿಸಿರುತ್ತಾರೆ ?

ಇದೀಗ ಗಂಟೆಗಟ್ಟಲೆ ಅಡಿಗೆಯಲ್ಲಿ ತೊಡಗಿದೆ, ಮನೆಯ ಅಂಗುಲ ಅಂಗುಲವನ್ನು ಮುಟ್ಟಿ ಒರಣ

ಮಾಡುತ್ತಾ ಕಳೆದೆ. ರಾತ್ರಿ ಲೊವೆಲ್ಲನ ಹಸ್ತಪ್ರತಿಯ ಟೈಪ್ ಮಾಡುತ್ತಾ ಕುಳಿತೆ. ಹತ್ತು ವರ್ಷಗಳು ಬರಹವನ್ನು ವೃತ್ತಿ ಮಾಡಿಕೊಂಡಿದ್ದ ನನಗೆ, ಬರೆಯುವುದಕ್ಕಿಂತ ನನ್ನವನ ಪ್ರತಿಯನ್ನು ಟೈಪ್ ಮಾಡುವುದು ಪರಮ ಕರ್ತವ್ಯವಾಗಿ ಕಂಡಿತು. ಅಥವಾ ಬರೆಯುವುದಕ್ಕಿಂತ ಟೈಪ್ ಮಾಡುವುದು ಆರಾಮಿತ್ತು, ಸುಭದ್ರವಿತ್ತು. ಹೀಗೇ ದಿನ, ತಿಂಗಳು ಕಳೆದವು. ಒಮ್ಮೊಮ್ಮೆ ಬರೆಯೋಣ ಎಂದು ಕುಳಿತವಳು 'ಉಹುಂ ನನಗೆ ಬರೆಯಲು ಆಗೊಲ್ಲ. ನನ್ನ ಅದೃಷ್ಟ ಸರಿ ಇಲ್ಲ' ಎಂದು ಎದ್ದು ಬಿಡುತ್ತಿದ್ದೆ. ಇದು ಅದೃಷ್ಟದ ಪ್ರಶ್ನೆಯಾಗಿರಲಿಲ್ಲ. ನನ್ನ ಅರಿವೇ ಇಲ್ಲದೆ ನನ್ನ ಬಗ್ಗೆ ನನಗೆ ಆತ್ಮವಿಶ್ವಾಸ-ಅಭಿಮಾನ ಕಳೆದು ಹೋಗಿತ್ತು. ಇದೀಗ ನನ್ನ ಬದುಕಿನ ನಿರ್ಧಾರಗಳು ನನ್ನದಾಗಿರಲಿಲ್ಲ. ಎಲ್ಲಕ್ಕೂ ಲೊವೆಲ್ಲನ ಅಪ್ಪಣೆ-ಅನುಮತಿಗೆ ಕಾಯುತ್ತಿದ್ದೆ. ಅತಿ ಸಹಜವಾಗಿ, ಸರಳವಾಗಿ ಗಂಡಿಗೆ ಸಹಾಯಕಳಾಗುವ ಹೆಣ್ಣಿನ ಸಾಂಪ್ರದಾಯಿಕ ಪಾತ್ರದೊಳಗೆ ಸಿಕ್ಕಿಬಿದ್ದಿದ್ದೆ. ಮತ್ತೊಬ್ಬರ ಕನಸುಗಳನ್ನು ಟೈಪ್ ಮಾಡುತ್ತಾ ಕುಳಿತ್ತಿದ್ದೆ. ನನ್ನ ಅಧೀನತೆಯ ಒಪ್ಪಿಕೊಳ್ಳಲು ಕಾರಣವಿತ್ತು, ಸ್ವತಂತ್ರ ಅಸ್ತಿತ್ವ ಪಡೆಯುವ ಶ್ರಮವನ್ನು ತಡೆಗಟ್ಟುವ ಆಲಸ್ಯವಿತ್ತು. ಈ ಬದುಕು ಆರಾಮಿತ್ತು. ಹೊರಜಗತ್ತಿನ ದುಡಿತದ ಅಡ್ಡಿಗಳು, ಆತಂಕಗಳು, ಒತ್ತಡಗಳು ಇರಲಿಲ್ಲ.

ಆದರೆ ಲೊವೆಲ್ ಬಹಳ ದಿನ ನನ್ನ 'ರಕ್ಷಕ'ನ ಪಾತ್ರದಲ್ಲಿ ಖುಷಿ ಪಡಲಿಲ್ಲ. ಎಲ್ಲೋ ಈ ಸಂಬಂಧದ ಸಮೀಕರಣದ ಅಸಮತೋಲನ ರಾಚಿತ್ತು. ಒಂದು ದಿನ ಹೇಳಿದ—'ನಿನ್ನನ್ನು, ನಿನ್ನ ಮೂರು ಮಕ್ಕಳನ್ನು ನಾನೊಬ್ಬನೇ ಸಾಕುತ್ತಿದ್ದೇನೆ. ನೀ ಆರಾಮ ಕೈಚೆಲ್ಲಿ, ಕಾಲು ಚಾಚಿ ಕುಳಿತಿರುವೆ' ಅಂದು ಬಿಟ್ಟ. ಥಟ್ಟನೆ ನನಗೆ ಎಲ್ಲಿಲ್ಲದ ಕೋಪ, ಅಸಮಾಧಾನ. ಅವನ ಮನೆಯನ್ನು ನಾನು ಒಪ್ಪವಾಗಿ ಓರಣವಾಗಿ ಇಡುತ್ತಿಲ್ಲವೆ ? ಬೆಳಿಗ್ಗೆ—ಸಂಜೆ ಬಿಸಿ ಬಿಸಿ ಅಡುಗೆ ಮಾಡಿ ಬಡಿಸುತ್ತಿಲ್ಲವೆ ? ಮನೆಯ ಈ ಕತ್ತೆ ಚಾಕರಿಗಳನ್ನೆಲ್ಲ ಮಾಡುತ್ತಿಲ್ಲವೆ ? ಕೋಪದಿಂದ ಬುಸುಗುಟ್ಟಿದೆ. ಆದರೆಲ್ಲೋ ನನ್ನ ಒಳ ಮನಸ್ಸಿಗೆ ಗೊತ್ತಿತ್ತು ಈ ಕತ್ತೆಚಾಕರಿ ಸುರಕ್ಷಿತವಿದೆ, ಇದು ನನ್ನ ಆಯ್ಕೆಯಾಗಿದೆ ಎಂದು.

ಮೊಟ್ಟ ಮೊದಲಿಗೆ ಕುಳಿತು ಯೋಚಿಸಿದೆ. ನನ್ನ ಭೀತಿಯಾದರೂ ಏನು, ಎಂಥಹುದು ? ಈ ಸ್ವಾತಂತ್ರ್ಯದ ಭೀತಿ ! ಬರೆಯದ, ದುಡಿಯದ ಈ ದಿನಗಳು ಆರಾಮಿದ್ದರೂ ಎಲ್ಲಿಯೋ ನನ್ನ ಆತ್ಮವಿಶ್ವಾಸವನ್ನು, ಆತ್ಮಗೌರವವನ್ನು ಕುಗ್ಗಿಸಿಬಿಟ್ಟಿವೆ. ನನ್ನನ್ನು ಲೊವೆಲ್‌ಗಿಂತ ಅಶಕ್ತಳಾಗಿ ಅಸಮರ್ಥಳಾಗಿ ಭಾವಿಸಿದ್ದೆ, ಊಹಿಸಿದ್ದೆ. ಅಷ್ಟೇ ಅಲ್ಲ ಅವನತ್ತ ನನ್ನ ನಿರೀಕ್ಷೆಗಳು ಹೆಚ್ಚಿದ್ದವು, ಅವ ನನ್ನನ್ನು ರಕ್ಷಿಸಬೇಕೆಂದು ಪಕ್ಕಿನಂತೆ ಬಯಸಿದ್ದೆ ಮತ್ತೆ ನನ್ನ ಬದುಕಿಗೆ ನಾನೇ ಜವಾಬ್ದಾರಳಾಗುವುದು ಬೇಕಿರಲಿಲ್ಲ. ಎಲ್ಲಿಯೋ ನನಗೆ ಸ್ವಾತಂತ್ರ್ಯದ ಭಯವಿತ್ತು.

---

**ಕಾಲೆಟ್ ಡಾಲಿಂಗ್ ತನ್ನ ವೈಯಕ್ತಿಕ ಅನುಭವವನ್ನು 'ಸಿಂಡ್ರೆಲ್ಲಾ ಕಾಂಪ್ಲೆಕ್ಸ್' ಪುಸ್ತಕದಲ್ಲಿ ತೆರೆದಿಟ್ಟ ಪರಿ ಇದು. ಅತ್ಯಧಿಕ ಸಂಖ್ಯೆಯಲ್ಲಿ ಮಾರಾಟವಾದ ಈ ಪುಸ್ತಕ ಮಹಿಳೆಯರ ಅಂತರಂಗದ ಭೀತಿಯನ್ನು ಗುರುತಿಸಲು ಪ್ರಯತ್ನಿಸಿದೆ. ಮಹಿಳೆಯರ ಮಾನಸಿಕ ಅವಲಂಬನೆ, ಸ್ವಾತಂತ್ರ್ಯದ ಭಯವನ್ನು ಕಾಲೆಟ್ ಡಾಲಿಂಗ್ 'ಸಿಂಡ್ರೆಲ್ಲಾ ಕಾಂಪ್ಲೆಕ್ಸ್' ಎಂದು ಕರೆದಿದ್ದಾಳೆ.**

---

ನನ್ನಂಥಹ ಈ ಅನಿಸಿಕೆಗಳು, ಭೀತಿಗಳು ನನ್ನೊಬ್ಬಳಿಗೇ ಮೀಸಲೆ, ಇಲ್ಲ, ಇತರರಿಗೂ ಅನ್ನಿಸಿರಬಹುದೆ, ಕುತೂಹಲವಾಯಿತು. ಯಾರೂ ನನ್ನೊಡನೆ ಇಂಥಾ ಅನುಭವಗಳನ್ನು ಹಂಚಿಕೊಂಡಿರಲಿಲ್ಲ. ಇದೀಗ ನಾನು ಹಂಚಿಕೊಳ್ಳಲು ನಿರ್ಧರಿಸಿದೆ. ನ್ಯೂಯಾರ್ಕ್ ಪತ್ರಿಕೆಗೆ ನನ್ನ ಕತೆ ಬರೆದೆ—'ಬಿಡುಗಡೆಯಾಚೆಗೆ ; ಅವಲಂಬಿತ ಮಹಿಳೆಯ ಅನಿಸಿಕೆಗಳು' ಲೇಖನ ಪ್ರಕಟವಾಯಿತು. ಥಟ್ಟನೆ ಅಂಚೆಯಲ್ಲಿ ಬಂದ ಓದುಗರ ಪತ್ರಗಳ ಮಹಾಪೂರ ! ನಾನು ನನ್ನ ಈ ಭಯದಲ್ಲಿ, ವಿಚಿತ್ರ 'ಕಾಂಪ್ಲೆಕ್ಸ್'ನಲ್ಲಿ ಒಂಟಿ ಇರಲಿಲ್ಲ. ಎಲ್ಲಿಯೋ ನಮ್ಮನ್ನು ಅವಲಂಬಿತರಾಗಿಯೇ ಬೆಳೆಸಿದ ಪರಿ, ಅವಲಂಬನೆಯನ್ನೇ ಆದರ್ಶವಾಗಿ ಹಾಡಿ ಹೊಗಳಿದ ಪರಿಯಲ್ಲಿ, ಸ್ವಾತಂತ್ರ್ಯವನ್ನು ಸವಿಯುವುದನ್ನೇ ನಾವು ಕಲಿತಿರಲಿಲ್ಲ."

ಇದು ವಿದೇಶದಲ್ಲಿ ಹುಟ್ಟಿ ಬೆಳೆದ ವಿದೇಶಿ ಮಹಿಳೆಗೆ ಸೀಮಿತ ಅನುಭವವಲ್ಲ. ಬಹುಶಃ ಎಲ್ಲ ಮಹಿಳೆಯರಲ್ಲೂ ಗೃಹಿಣಿಯರಾಗಲೀ, ಉದ್ಯೋಗಸ್ಥರಾಗಲಿ 'ಸಿಂಡ್ರೆಲ್ಲಾ ಕಾಂಪ್ಲೆಕ್ಸ್' ಒಂದಿಲ್ಲೊಂದು ಪ್ರಮಾಣದಲ್ಲಿ ಕಾಡುತ್ತದೆ. ಕಾರಣ, ದೇಶ–ಕಾಲದ ವ್ಯತ್ಯಾಸವಿಲ್ಲದೆ ಹೆಚ್ಚಿನ ಎಲ್ಲಾ ಸಮಾಜಗಳು, ಸಂಸ್ಕೃತಿಗಳು ಮಹಿಳೆಯನ್ನು ಸ್ವಾತಂತ್ರ್ಯವಿಲ್ಲದ, ಪುರುಷರಿಗಿಂತ ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ ಕೆಳಮಟ್ಟದಲ್ಲಿರುವ ಜೀವಿಗಳೆಂದು ಪ್ರತ್ಯೇಕಿಸುತ್ತವೆ. ಮಹಿಳೆಯರನ್ನು ಕಾಪಾಡಬೇಕಾದ, ಸಂರಕ್ಷಿಸಬೇಕಾದ 'ಆಸ್ತಿ' ಎಂದು ನಂಬುತ್ತವೆ. ಹಾಗೆಂದೇ ಮಹಿಳೆಯರು ತಮ್ಮ ಅಶಕ್ತಿ, ಅಸಹಾಯಕತೆಯನ್ನು 'ಸಹಜ' 'ಪ್ರಕೃತಿ ನಿಯಮ' ಎಂದು ನಂಬಿ ಬೆಳೆಯುತ್ತಾರೆ. ಬದುಕಿನ ಅಪ್ಪಟ ಅನಿವಾರ್ಯತೆಯಲ್ಲಿ, ವೈಧವ್ಯ-ವಿಚ್ಛೇದನಗಳಲ್ಲಿ ಥಟ್ಟನೆ ತಮ್ಮ ಸಾಮರ್ಥ್ಯವನ್ನು ಹೂಡಿ ಮೇಲೆದ್ದವರುಂಟು. ಆದರೆ ಆಸರೆ ದೊರೆತೊಡನೆ, ವಿವಾಹವಾದೊಡನೆ, ತಮ್ಮೆಲ್ಲ ಪ್ರತಿಭೆಯನ್ನು ಮೂಟೆಕಟ್ಟಿಡುವ ಮಹಿಳೆಯರು ಅಧಿಕ. ಕೈ ತುಂಬಾ ತಂದು ಹಾಕುವ ಗಂಡನಾದರೆ ಮತ್ತೂ ಆರಾಮ. ಮನೆ–ಮಕ್ಕಳು ಅವರ ನಿಷ್ಕ್ರಿಯತೆಗೆ ಸಾಕಷ್ಟು ನೆಪಗಳನ್ನು ಒದಗಿಸಬಲ್ಲವು. ಆದರೆ ಎಲ್ಲಾ ಮಹಿಳೆಯರಿಗೂ ಆರಾಮ, ಐಷಾರಾಮ ಸಲೀಸಾಗಿ ದೊರೆಯುವುದಿಲ್ಲ. ಬದುಕಿನ ದುರಂತಗಳಲ್ಲಿ ಎಲ್ಲರೂ ತಮ್ಮ ಸಾಮರ್ಥ್ಯ ಗುರುತಿಸಿ ಮೇಲೆ ಬಂದವರಲ್ಲ. ತಮ್ಮ ಮೇಲೆ ಹೇರಲ್ಪಟ್ಟ ಅಸಹಾಯಕತೆಯನ್ನು ನಂಬಿ ಆತ್ಮಹತ್ಯೆ ಮಾಡಿಕೊಂಡವರು, ಎಂಥಹ ಗಂಡನಾದರೂ ಸರಿ ಚಿತ್ರಹಿಂಸೆ ಸಹಿಸಿಕೊಂಡವರು, ವರದಕ್ಷಿಣೆ ಕೊಟ್ಟಾದರೂ ಸರಿ ವಿವಾಹವಾದವರು ಇದ್ದಾರೆ. 'ಕಷ್ಟವನ್ನು ಸಹಿಸು'ವುದನ್ನಷ್ಟನ್ನೇ ಕಲಿತವರು, ಕಷ್ಟಗಳಿಂದ ಪಾರಾಗುವುದನ್ನು, ಕಷ್ಟಗಳನ್ನು ಎದುರಿಸಲು ತಿಳಿಯದವರು. ಮಹಿಳೆಯರ ಈ ಒಟ್ಟು ಮನೋಭಾವವನ್ನು ಅವರ ಸ್ವಾತಂತ್ರ್ಯದ ಭೀತಿಯನ್ನು, ಅವಲಂಬನೆಯ ಆಕಾಂಕ್ಷೆಯನ್ನು, ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಚರ್ಚಿಸುವ ಕಾಲೆಟ್‌ಡಾಲಿಂಗ್ (Colette Dowling) ಅವರ 'ಸಿಂಡ್ರೆಲ್ಲಾ ಕಾಂಪ್ಲೆಕ್ಸ್' 1981ರಲ್ಲಿ ಪ್ರಕಟವಾಗಿದ್ದರೂ ಇಂದಿಗೂ ಪ್ರಸ್ತುತವಾಗುವ ಪುಸ್ತಕ.

---

ಮಹಿಳೆಯರ ಲೈಂಗಿಕ ಸಂವೇದನೆ ದುರ್ಬಲವೆಂಬ ಗ್ರಹಿಕೆಯನ್ನು ಆಧಾರವಾಗಿಟ್ಟುಕೊಂಡು (ಫ್ರಾಯ್ಡ್ ಮತ್ತಿತರ ಮನಶ್ಶಾಸ್ತ್ರಜ್ಞರಿಂದ) ಪ್ರತಿಪಾದಿಸಲ್ಪಟ್ಟಿರುವ ಸಿದ್ಧಾಂತಗಳು ಜೈವಿಕ ವಾಸ್ತವಾಂಶಗಳನ್ನು ಆಧರಿಸಿಲ್ಲ. ಬದಲಾಗಿ ಅವು ಒಂದು ಸಾಂಸ್ಕೃತಿಕ ಚೌಕಟ್ಟು ಮತ್ತು ಸಮುದಾಯಕ್ಕೆ ಅನುಗುಣವಾಗಿವೆ. ಬಲವಾದ ಪಿತೃಪ್ರಧಾನ ವ್ಯವಸ್ಥೆ ಇರುವ ಯಾವುದೇ ಸಮಾಜದಲ್ಲೂ, ಅವು ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಮೌಲಿಕವೆಂದು ಅನ್ನಿಸಿಕೊಳ್ಳಲು ಸಾಧ್ಯ. ವಿಭಿನ್ನ ಸಂಸ್ಕೃತಿಗಳೊಳಗೆ ಎಚ್ಚರಿಕೆಯಿಂದ ನಡೆಸಲ್ಪಡುತ್ತಿರುವ ಮಾನವಶಾಸ್ತ್ರೀಯ ಸಮಾಜಶಾಸ್ತ್ರೀಯ ಅಧ್ಯಯನಗಳನ್ನು ಅನುಸರಿಸುವ ಮನೋವಿಶ್ಲೇಷಣಾತಜ್ಞರು ಅವರದೇ ಆದ ಸಂಘವೊಂದನ್ನು ಇಂದು ರೂಢಿಸುತ್ತಿದ್ದಾರೆ. ಆ ಸಂಘವು ಜಗತ್ತಿನ ಬೇರೆ ಬೇರೆ ಪ್ರದೇಶಗಳಲ್ಲಿ ವ್ಯಕ್ತಿಗಳು ಬೆಳೆಸಲ್ಪಡುವ ಸಾಂಸ್ಕೃತಿಕ ಚೌಕಟ್ಟುಗಳ ನಡುವಿನ ವ್ಯತ್ಯಾಸದಿಂದಾಗಿ ಬೌದ್ಧಿಕ ಬೆಳವಣಿಗೆಗಳಲ್ಲಾಗುವ ವ್ಯತ್ಯಾಸಕ್ಕೆ ಹೆಚ್ಚು ಗಮನ ಕೊಡುವ ಆಧುನಿಕ ಮನಶಾಸ್ತ್ರಜ್ಞರದು ಆಧುನಿಕ ಪಂಥವಾಗಿದೆ.

ಬೇರೆ ಬೇರೆ ಸಮಾಜಗಳಲ್ಲಿ ಮಹಿಳೆಯರು ಬೇರೆ ಬೇರೆ ಸಾಮಾಜಿಕ ಕ್ರಿಯೆಗಳನ್ನು ನಿಭಾಯಿಸುತ್ತಾರೆ, ಅದಕ್ಕೆ ತಕ್ಕಂತೆ ಅವರು ಬೇರೆ ಬೇರೆ ಬೌದ್ಧಿಕಲಕ್ಷಣ, ಧೋರಣೆಗಳನ್ನು ತೋರುತ್ತಾರೆಂಬ ವಾಸ್ತವದ ಅರಿವು ಶರೀರ ಲಕ್ಷಣ ಮತ್ತು ಜೈವಿಕ ವಾಸ್ತವಾಂಶಗಳೇ ವ್ಯಕ್ತಿತ್ವ ಲಕ್ಷಣ ರೂಪಿಸುವ ಸರ್ವಶಕ್ತ, ಪ್ರಭಾವಶಾಲಿ ಅಂಶವೆನ್ನುವ ಕಲ್ಪನೆಯನ್ನು ಛಿದ್ರಗೊಳಿಸಿದೆ.

**— ವಯೋಲಾ ಕ್ಲೈನ್**

# ಅನುಭವದ ಅಧಿಕೃತತೆ ತುರ್ತುಗಳ ಕಲಾವಂತಿಕೆ–ಶೀಲಾಗೌಡ

— ಕೆ.ಎಸ್. ಶ್ರೀನಿವಾಸಮೂರ್ತಿ

(ಚಿತ್ರಕಲಾ ವಿಮರ್ಶೆ)

ಸಂವೇದನೆಗಳಲ್ಲಿನ ಬಿರುಕು ನಮ್ಮ ನಾಗರಿಕ ಬದುಕನ್ನು ಮೃಗೀಯವನ್ನಾಗಿಸಿದೆ. ನಮ್ಮ ಯೋಚನೆ, ಭಾವನೆಗಳು ಒಂದಾಗಿ ಬೆರೆತು ಹೊರಬರಲಾರದ ಸ್ಥಿತಿಯಿದೆ. ಇಂಥ ಪರಿಸರದಲ್ಲಿ ಕಲೆ–ಕಲಾವಿರೋಧಿ ಅಂಶಗಳನ್ನು ಧೃವೀಕರಿಸುವ ತಾಂತ್ರಿಕ ಪ್ರದರ್ಶನದಲ್ಲಿ ಮುಳುಗುವ ರೀತಿಯ ಕಲೆಗಿಂತ ಒಂದು ಸಮಗ್ರದರ್ಶನದ ಭರವಸೆ ನೀಡಬಲ್ಲ ಕಲೆ ಹೆಚ್ಚು ಪ್ರಸ್ತುತವೂ ಮಹತ್ವದ್ದೂ ಆಗಿರುತ್ತದೆ.

ಯಾವುದೇ ಸುಲಭ ಸರಳೀಕರಣಕ್ಕೆ/ಧೃವೀಕರಣಕ್ಕೆ ಆಸ್ಪದ ನೀಡದೆ ನಮಗೆ ತುಂಬ ಹತ್ತಿರದ 'ನಿಜ'ವೊಂದನ್ನು 'ವಸ್ತು'ವಾಗಿಸಿ, ದೂರದಲ್ಲಿಟ್ಟು ತೋರಿಸುವ ಸಮಕಾಲೀನ ಕಲೆ, ಕಲೆಯ ಬಗೆಗಿನ ಪರಮಪವಿತ್ರವೆಂಬಂಥ ಪರಿಕಲ್ಪನೆಗಳನ್ನು ಕುರಿತು ಪ್ರಶ್ನೆಯೆತ್ತುತ್ತದೆ. ಈ ಪ್ರಶ್ನಿಸುವ ಪ್ರಕ್ರಿಯೆಗೆ ಅಭಿವ್ಯಕ್ತಿಯ ಸಾಧನವಸ್ತುವಿನ ಬದಲಾವಣೆ ಕೂಡ ಒಂದು ನಿದರ್ಶನವಾಗಿದೆ. ಶೀಲಾ ಗೌಡ ಅವರ ಇತ್ತೀಚಿನ ಕೃತಿಗಳು ಸಂವೇದನೆಯಲ್ಲಿನ ಒಡಕು, ಪಶುತ್ವ, ಪಾವಿತ್ರ್ಯ, ಲೌಕಿಕತೆ, ಸ್ವಂತದ ವೈಭವೀಕರಣ ಮತ್ತು ಬದುಕಿನ ಜೀವಂತಿಕೆಯ ಮೂಲಗಳ ಬಗ್ಗೆ ಸ್ಪಷ್ಟ ಸೂಚನೆ ನೀಡುತ್ತವೆ. ಈ ಕೃತಿಗಳ ಹಿಂದೆ ಪ್ರವೃತಿನಿಷ್ಠವೂ ವಿಶ್ಲೇಷಕವೂ ಆದ ಮನಸ್ಸೊಂದು ಕ್ರಿಯಾಶೀಲವಾಗಿದೆ.

ಧಾರ್ಮಿಕ ವಿಧ್ಯುಕ್ತ ಆಚರಣೆಗಳಲ್ಲಿ ಚಿರಪರಿಚಿತವಾದ ಸೆಗಣಿ, ಅರಿಶಿನ, ಕುಂಕುಮದಂಥ ಸಾಧನವಸ್ತುಗಳನ್ನು ಬಳಸಿ ಸಾಮಾಜಿಕ, ಧಾರ್ಮಿಕ ನಂಬಿಕೆಗಳ ಚೌಕಟ್ಟುಗಳನ್ನು ಈ ಕೃತಿಗಳು ಪ್ರಶ್ನಿಸುತ್ತವೆ. ಒಂದು ಸಾಮಾಜಿಕ ಕಳಕಳಿ ಇವುಗಳಿಗಿದೆ. ಮೌಲ್ಯಗಳ ಸೂಕ್ಷ್ಮರೀತಿಯ ಪರಿಶೀಲನೆ ಅಥವಾ ಒಂದು ನಿರ್ದಿಷ್ಟ ನೋಡುಗರ ಮಹತ್ವವನ್ನು ಗುರುತಿಸುವಿಕೆ ಈ ಕೃತಿಗಳನ್ನು ಹೆಚ್ಚು ಪ್ರಸ್ತುತವನ್ನಾಗಿಸುತ್ತವೆ. ಕಲಾವಿದ ಸಹಜವಾದ ಚಿಹ್ನೆಗಳನ್ನು ವಂಥ ಸಂಜ್ಞೆಗಳು, ಸುರುಳಿಗಳು, ಕುಣಿಕೆಗಳು ಇತ್ಯಾದಿ ಮತ್ತೆ ಮತ್ತೆ ಮರುಕಳಿಸುತ್ತವೆ. ಆದರೆ ಅವು ಖಚಿತವಾದ ಆಕಾರ ಗುರುತಿಸಲು ಸಾಧ್ಯವಿರುವ ವಸ್ತು, ರೂಪಗಳ ಗುಣವಾಚಕಗಳಲ್ಲ ಅಥವಾ ನಿರಾಕಾರ ಕೃತಿಗಳ ಮಾದರಿಯೂ ಇಲ್ಲಿ ಇಲ್ಲ. ಬದಲಾಗಿ ಶೀಲಾ ಅವರು ಪ್ರತಿನಿಧೀಕರಣದ ಭಾಷೆ ಬಳಸಿ ತಮ್ಮ ಅಧಿಕೃತತೆಯನ್ನು ಅಭಿವ್ಯಕ್ತಿಸಲು ಹೊಸ ಹೊಸ ಆಯ್ಕೆಗಳನ್ನು ಹುಡುಕುತ್ತಾರೆ. ರೂಪನಿಷ್ಠೆ ಪ್ರಧಾನವಾದ ಪ್ರವೃತ್ತಿಗಳು (Instincts) ಇಲ್ಲಿ ದಾರಿ ತೋರುವ ಅಂಶಗಳು.

ವೈರುಧ್ಯ, ಒಳತೋಟಿಗಳಿರುವ ಹಲವು ಬಗೆಯ ಮಾನಸಿಕ ಭಾವಸಂಬಂಧಗಳು ಚಿತ್ರಗಳ ಮೂಲಆಶಯದ ರೂಪಕವನ್ನು ವಿಸ್ತರಿಸುವುದು ಇಲ್ಲಿ ಅನಿವಾರ್ಯವಲ್ಲ. ಉದಾಹರಣೆಗೆ, ಹಿಂಸೆ, ತ್ಯಾಗ, ಹುತಾತ್ಮತೆಗೆ ಸಂಬಂಧಿಸಿದ ಭಾವಗಳನ್ನು ಈ ಚಿತ್ರಗಳ ವರ್ಣಸಾಂದ್ರತೆ ಮತ್ತು ಧೋರಣೆಗಳು ಸ್ಫುಟಗೊಳಿಸುತ್ತ ಅಂಥ ಹೇಳಿಕೆಯೊಂದಕ್ಕೆ ಅವಕಾಶ ನೀಡುವುದಿಲ್ಲ. ಈ ಟಾರ್ಸೋಗಳು ಮೂಲದಲ್ಲಿ ಮೂಕ ಹಾಗೂ ಜಡವಾದಂಥವು. ಜಡತೆ, ಮೂಕತೆಗಳು ಅವುಗಳ ಮೇಲಿನ ಆಕ್ರಮಣಕಾರಿ ಭಾವಗಳ ಮತ್ತು ವಿಜಯಸಂಕೇತಗಳ ಭಾವಗಳನ್ನು ತೀವ್ರಗೊಳಿಸುತ್ತವೆ. ಅಗ್ಗದ ಚೀಟಿ ಬಟ್ಟೆ ತುಂಡುಗಳು, ಇದ್ದಿಲು; ಮರದ ಕಡ್ಡಿಗಳು, ತಿವಿಯುವ ಬೆರಳುಗಳು ಈ ಟಾರ್ಸೋಗಳ ಮೂಲ ರೂಪಕವನ್ನು ಪರಿಣಾಮಕಾರಿಯಾಗಿ ವಿಸ್ತರಿಸಲಾರವು. ಹೆಚ್ಚೆಂದರೆ ಉದ್ದೇಶಿತ ಅರ್ಥಸಂದಿಗ್ಧತೆಗೆ ಹೊಂದದ ನೇರವಾದ ತಾರ್ಕಿಕ ನೋಟವನ್ನು ಅವು ನಿವಾರಿಸುತ್ತವೆ. ಅಥವಾ ಕಲಾ ಮಾಧ್ಯಮದ ಬಳಕೆಯಲ್ಲಿ ಕಲಾವಿದೆಯು ಸಾಧಿಸಲೆತ್ನಿಸುವ ಹೆಚ್ಚಿನ ನಮ್ಯತೆಯತ್ತ (Flexibility) ಅವು ಸೂಚನೆ ನೀಡುತ್ತವೆ.

ಈ ಕೃತಿಗಳಲ್ಲಿನ ಸೂಕ್ಷ್ಮತೆ ಕಲಾವಿದೆ ತನ್ನ ಮಾಧ್ಯಮದ ಬಗ್ಗೆ ತೋರುವ ಸೂಕ್ಷ್ಮತೆಗೆ ಸಂಬಂಧಿಸಿದ್ದು. ಅಮೂರ್ತ ಎಕ್ಸ್‌ಪ್ರೆಷನಿಷ್ಟರ ಲಕ್ಷಣವೆನ್ನಲಾಗುವ 'ರೊಮ್ಯಾಂಟಿಕ್ ಅಮೂರ್ತತೆ' ಇಲ್ಲಿ ಕೆಲವು ಸಲ ಧ್ವನಿಸುತ್ತದೆ. ಮತ್ತೆ ಕೆಲವು ಕಡೆ ಪ್ರಜ್ಞಾಪೂರ್ವಕವಾಗಿ ಆರಿಸಿಕೊಂಡ ಸಾಧನವಸ್ತು ಧಾರ್ಮಿಕ ಸಾಮಾಜಿಕ ಭಾವ ಸಂಬಂಧಗಳನ್ನು ಹುಟ್ಟಿಸಿ ಬದುಕು–ಸಾವಿನ ಜೀವಚಕ್ರವನ್ನು, ಮತ್ತೆ ಚೈತನ್ಯ ತುಂಬುವ ಸಾಧ್ಯತೆಯನ್ನು ಸೂಚಿಸುತ್ತದೆ. ವಿರಕ್ತಿಯ ಜಡತೆ, ಚೈತನ್ಯದ ಸೆಲೆಗಳನ್ನು ಚಿತ್ರಿಸುವಲ್ಲಿ ಜೈವಿಕ ಸಫಲತೆಯುಳ್ಳ ಪ್ರಾಕೃತಿಕ ದೃಶ್ಯದ ಜೊತೆಗೇ ನಿರ್ಜೀವ ವಸ್ತುಗಳಾದ ಮರದ ಕಡ್ಡಿಗಳು, ಮುಳ್ಳುಗಳು, ಇದ್ದಿಲಿನಂಥವು ವಿಚ್ಛೇದನವನ್ನು ಸೃಷ್ಟಿಸುವ ಬಗೆ ಶೀಲಾ ಅಭಿವ್ಯಕ್ತಿಯಲ್ಲಿ ಸಾಧಿಸುವ ಸಮ್ಯತೆಗೊಂದು ನಿದರ್ಶನ.

ಸ್ಪಷ್ಟತೆಗಾಗಿ ಒಂದು ಕೃತಿಯನ್ನು ನಿಕಟವಾಗಿ ಪರಿಶೀಲಿಸಬಹುದು. ಸ್ತ್ರೀಯಾಕಾರದ ಟಾರ್ಸೋದ ಎಲ್ಲೆಗಳು ಅಲೆಯಲೆಯಾಗಿ ಅನಿರ್ದಿಷ್ಟವಾಗಿದ್ದು ಪ್ರಾಣಿಯ ಹರಿದ ಚರ್ಮವೊಂದನ್ನು ನೇತುಹಾಕಿದಂತಿರುವುದು ಪ್ರವೃತ್ತಿ ಮತ್ತು ವೈಚಾರಿಕತೆಗಳನ್ನು ಒಂದಾಗಿಸುವ ಶೀಲಾ ಅವರ ಕ್ರಮಕ್ಕೆ ಒಂದು ಉದಾಹರಣೆ. ಇಂದ್ರಿಯಜನ್ಯ ಸುಖಾನುಭವಗಳು ಮತ್ತು ಪಶುತ್ವಗಳು ಇಲ್ಲಿ ಒಟ್ಟಾಗಿ ಒಳಗೊಳ್ಳುತ್ತವೆ. ಒಬ್ಬ ಬೇಟೆಗಾರನ ಗೆಲುವಿನ ಸ್ಮಾರಕ ಇದಾಗಬಹುದು. ಅದೇ ಗಳಿಗೆಗೆ ಕಲಾತ್ಮಕ ಅಂತರವನ್ನು, ಸ್ವಾಮ್ಯ ಪ್ರವೃತ್ತಿಯನ್ನು, ಆದಿಕಾಲದ ಬೇಟೆಗಾರನ ಹೆಮ್ಮೆಯನ್ನೂ ಒಟ್ಟಾಗಿ ಸೂಚಿಸುತ್ತಿರಬಹುದು. ತನ್ನ ಕೋಮಲ, ರಸಭರಿತತೆಯ ಜೊತೆಯೇ ಈ ಪ್ರತಿಮೆ ಶಾಕ್ ಕೊಡಬಲ್ಲ ನೋಟದ ಮೂಲಕ ಛೀಮಾರಿ ಹಾಕುವ ವ್ಯಂಗ್ಯವನ್ನು ಸಮರ್ಥಿಸುತ್ತದೆ. ಒಂದು ಮೂಕ ಅಲಂಕಾರವಸ್ತುವಾಗಿ ಅಥವ ಪಶುತ್ವದ ಸಂಕೇತವಾಗಿಯೂ ಅದೇ ಹೊತ್ತಿನಲ್ಲಿ ತೋರಬಹುದು. ಹೀಗೆ ಪ್ರತ್ಯೇಕಗೊಳಿಸಲ್ಪಟ್ಟು ಕೋಮಲತೆಯೊಂದಿಗೆ ಪ್ರದರ್ಶಿಸಲ್ಪಡುವ ಈ ವಸ್ತು 'ಪರಮ ಪವಿತ್ರ'ತೆಯ ಪರಿಕಲ್ಪನೆಯೊಳಗಿನ ಆತ್ಮ ವಂಚಕತನವನ್ನು ಬಿಚ್ಚಿರಿಸುತ್ತದೆ. ಸ್ತ್ರೀ ಶರೀರದ ಮೇಲಿನ ಹಿಂಸಾತ್ಮಕ ಆಕ್ರಮಣ ಮತ್ತು ಅಪವಿತ್ರತೆಯ ವಿಸ್ತೃತವಾದ ರೂಪಕವಾಗುತ್ತಲೆ ಸ್ವ–ವೈಭವೀಕರಣದ ಮೇಲೂ ನೋಟ ಕೇಂದ್ರಿಸುತ್ತದೆ.

ಸುಮಾರು ಒಂದು ದಶಕದಿಂದ ಅಭಿವ್ಯಕ್ತಿಯಲ್ಲಿ ಅಸಾಂಪ್ರದಾಯಿಕ ವಿಧಾನಗಳ ಹುಡುಕಾಟಕ್ಕೆ ವೇದಿಕೆಯೊಂದು ನಮ್ಮ ಕಲೆಯ ಕ್ಷೇತ್ರದಲ್ಲಿ ನಿರ್ಮಾಣವಾಗಿದೆ. ಈ ಕ್ಷೇತ್ರದ ಹಲವು ಅಲಿಖಿತ ನಿಷೇಧಗಳ ವಿರುದ್ಧವಾಗಿ ಸಾಧನವಸ್ತುಗಳ ಮೂಲಕ ಪ್ರತಿಭಟಿಸುವ ಅಲೆಯೊಂದು ಈಗ ಗಾಳಿಯಲ್ಲಿದೆ. ಈ ಹಿನ್ನೆಲೆಯಲ್ಲಿ ಶೀಲಾ ಅವರ ಕೃತಿಗಳು ತಮ್ಮ ಅಧಿಕೃತತೆ, ತುರ್ತುಗಳಿಂದ ವಿಶಿಷ್ಟವಾಗಿ ನಿಲ್ಲುತ್ತವೆ. ಕಲಾವಿದರ ಸಮುದಾಯ ಹೊಸ ಅಭಿವ್ಯಕ್ತಿ ವಿಧಾನಗಳನ್ನು ವೇಗವಾಗಿ ಅಳವಡಿಸಿಕೊಳ್ಳುತ್ತಿದೆ. ಜನಪ್ರಿಯ ಮನಸ್ಸು ಸಮೂಹ ಮಾಧ್ಯಮಗಳು, ಜಾಹೀರಾತುಗಳು ತೋರಿಸುವ ಆ ವಿಧಾನಗಳನ್ನು ಬಲು ಬೇಗ ಒಪ್ಪಿಕೊಂಡು ಬಿಡುತ್ತಿದೆ. ಇಂಥ ಪ್ರಕ್ರಿಯೆಯ ವಿರುದ್ಧವಾಗಿ 'ಅಹಿತಕರ ಅನುಭವ'ದ ಮೂಲಕ ಶಾಕ್ ಕೊಡುವ ಶೀಲಾಗೌಡ ಅವರ ಕೃತಿಗಳು ಅಧಿಕೃತತೆ, ಅನಿವಾರ್ಯತೆಯ ಗುಣ ಹೊಂದಿವೆ. ಅವರ ಕೃತಿಗಳಲ್ಲಿ ಒಂದು ಬಗೆಯ ತಪ್ಪಿತಸ್ಥ ಭಾವನೆ, ಭೀಕರತೆಯ ಅರ್ಥಗಳು ಜೀವನಪ್ರೇಮದಿಂದ ಧೃವೀಕರಿಸದೆಯೇ ಸೂಚಿತವಾಗುತ್ತವೆ. ಚಿತ್ರದ ಒಳಗಿನ–ಹೊರಗಿನ ಸ್ಥಳಾವಕಾಶದ ವೈಶಿಷ್ಟ್ಯಗಳಿಂದ ಎದ್ದು ತೋರುವಷ್ಟು ಪ್ರತ್ಯೇಕವಾಗಿ ತನ್ನ ಅಧಿಕೃತತೆಯನ್ನು ಅಂತರ್ಗುಣವಾಗಿ ಪಡೆದುಕೊಳ್ಳುವ ಮೂಲಕ ಇವು ನಮ್ಮೊಳಗಿನ ಪಶುವನ್ನೂ, ನಮ್ಮೊಳಗಿನ ಮಾನವನನ್ನೂ ಒಟ್ಟಾಗಿ ಪ್ರತಿನಿಧಿಸುತ್ತವೆ.

[ಇತ್ತೀಚೆಗೆ ಬೆಂಗಳೂರಿನ ವೆಂಕಟಪ್ಪ ಆರ್ಟ್‌ಗ್ಯಾಲರಿಯಲ್ಲಿ ಪ್ರದರ್ಶನ ಏರ್ಪಟ್ಟಿದ್ದ ಶ್ರೀಮತಿ ಶೀಲಾಗೌಡ ಅವರ ಇತ್ತೀಚಿನ ಕಲಾಕೃತಿಗಳ ಬಗ್ಗೆ ಕನ್ನಡ–ಇಂಗ್ಲಿಷ್‌ಗಳಲ್ಲಿ ಕಲಾವಿಮರ್ಶಕರಾಗಿರುವ ಶ್ರೀ ಕೆ. ಎಸ್. ಶ್ರೀನಿವಾಸಮೂರ್ತಿಯವರು ರಚಿಸಿದ ವಿಮರ್ಶಾ ಟಿಪ್ಪಣಿಯಿಂದ ಸಂಗ್ರಹಿಸಿದ ಅಭಿಪ್ರಾಯಗಳಿವು. ಅನುವಾದ : ಸುಮಿತ್ರಾ]

## ಹೊಸ ಪುಸ್ತಕಗಳು

### 1. ದಾಂಪತ್ಯ ಸಮಸ್ಯೆಗಳು
### 2. ನಿಮ್ಮ ಮಾನಸಿಕ ಆರೋಗ್ಯವನ್ನು ಹೆಚ್ಚಿಸಿಕೊಳ್ಳಿ

ಲೇ. ಡಾ॥ ಸಿ.ಆರ್. ಚಂದ್ರಶೇಖರ್,
ನವಕರ್ನಾಟಕ ಪಬ್ಲಿಕೇಷನ್, ಪ್ರೈ. ಲಿಮಿಟೆಡ್,
ಬೆಂಗಳೂರು.

ದಾಂಪತ್ಯವಿರಸವೆಂಬ ಬೆಂಕಿ ದಂಪತಿಗಳನ್ನಲ್ಲದೆ ಇಡೀ ಕುಟುಂಬವನ್ನು ಸುಡಬಲ್ಲದು, ದಾಂಪತ್ಯವಿರಸದ ಕಾರಣಗಳೇನು, ಪರಿಹಾರವೇನು ಎಂಬುದನ್ನು ತಿಳಿಸಿಕೊಡುವ ಉತ್ತಮ ಮಾಹಿತಿ "ದಾಂಪತ್ಯ ಸಮಸ್ಯೆಗಳು" ಗ್ರಂಥದಲ್ಲಿದೆ. ಉತ್ತಮ ಪರಿಸರ, ಧಾರ್ಮಿಕ ಆಚರಣೆಗಳು, ಸಾಂಸ್ಕೃತಿಕ ಚಟುವಟಿಕೆಗಳು, ಯೋಗ ಪ್ರಾಣಾಯಾಮ, ಸೃಜನಶೀಲ ಚಟುವಟಿಕೆಗಳು ಹೇಗೆ ಮನುಷ್ಯನ 'ಮಾನಸಿಕ ಆರೋಗ್ಯವನ್ನು ಹೆಚ್ಚಿಸಬಲ್ಲವು ಎಂಬುದನ್ನು ಪ್ರಶ್ನೋತ್ತರ ರೂಪದಲ್ಲಿ ತಿಳಿಸುವ ಗ್ರಂಥ "ನಿಮ್ಮ ಮಾನಸಿಕ ಆರೋಗ್ಯವನ್ನು ಹೆಚ್ಚಿಸಿಕೊಳ್ಳಿ".

### 3. ಮರ್ಯಾದೆಯ ಮುಸುಕಿನಲ್ಲಿ

ಲೇ. ಹೇಮಾ ಪಟ್ಟಣಶೆಟ್ಟಿ,
ಅನನ್ಯ ಪ್ರಕಾಶನ, ಧಾರವಾಡ

ಒಂದು ದಶಕದ ಅವಧಿಯಲ್ಲಿ ಬೇರೆ ಬೇರೆ ಕಾರ್ಯಕ್ರಮಗಳಿಗಾಗಿ ತಾವು ಸಿದ್ಧಪಡಿಸಿದ ಪ್ರಬಂಧಗಳ, ಲಘು ಲೇಖನಗಳ ಮೊದಲ ಸಂಕಲನವನ್ನು ಹೇಮಾ ಹೊರ ತಂದಿದ್ದಾರೆ. ಈ ಪ್ರಬಂಧಗಳ ಮುಖ್ಯವಸ್ತು 'ಹೆಣ್ಣು'. ಹೆಣ್ಣಿನ ಅನುಭವದ ಸಮಸ್ಯೆಗಳ ನಾನಾ ಮಗ್ಗುಲುಗಳನ್ನು ಈ ಲೇಖನಗಳು ತೆರೆದಿಡಲು ಯತ್ನಿಸುತ್ತವೆ.

### 4. ಮೊದಲ ಹೆಜ್ಜೆಗಳು

ಲೇ. ಡಾ॥ ಸಂಜೀವ ಕುಲಕರ್ಣಿ
ಶ್ರೀ ಹರಿ ಪ್ರಕಾಶನ, ಧಾರವಾಡ

ವೃತ್ತಿಯಿಂದ ವೈದ್ಯರಾಗಿರುವ ಉದಯೋನ್ಮುಖ ಕವಿ ಡಾ. ಸಂಜೀವ ಕುಲಕರ್ಣಿಯವರ ಮೊದಲ ಕವನ ಸಂಕಲನ ಇದು. ಚೆನ್ನವೀರ ಕಣವಿಯವರು ಇದಕ್ಕೆ ಮುನ್ನುಡಿ ಬರೆದಿದ್ದು 'ಭಾವ ತೀವ್ರತೆ ವೈಚಾರಿಕತೆಯು ಮೇಳವಿಸಿರುವ ಹೊಸದೃಷ್ಟಿಕೋನ' ಇಲ್ಲಿನ ಕವನಗಳಲ್ಲಿದೆಯೆಂದು ಸೂಚಿಸುತ್ತಾರೆ.

### 5. (i) ಇನ್ನು ಮುಂದೆ ಶಬ್ದವಿಲ್ಲ

ಲೇ : ಕೆ. ವೆಂಕಟೇಶ್ ಅವರ ಕಥಾ ಸಂಕಲನ
ಬೆಲೆ : 15ರೂ.

### (ii) ಬಾ ಅತ್ತ ಇತ್ತ

ಲೇ : ಗೋಪಾಲಕೃಷ್ಣ ಅಡಿಗರ ಕವನಗಳು (ಮರಣಾನಂತರದ ಪ್ರಕಟಣೆ) : ಬೆಲೆ 20ರೂ.

### (iii) ಆಧುನಿಕ ಕನ್ನಡ ಮಹಾಕಾವ್ಯಗಳು

ಸಂ. ಡಾ. ಬಸವರಾಜ ಸಾದರ
ಬೆಲೆ : 8ರೂ.

ಆಕಾಶವಾಣಿಯ ಬೆಂಗಳೂರು ಕೇಂದ್ರದ 'ಕನ್ನಡ ಭಾರತಿ' ಸಾಹಿತ್ಯಕ ಕಾರ್ಯಕ್ರಮದಲ್ಲಿ ಪ್ರಸಾರವಾದ 'ಆಧುನಿಕ ಕನ್ನಡ ಮಹಾಕಾವ್ಯಗಳು' ಎಂಬ ಮಾಲಿಕೆಯಲ್ಲಿ ವಿದ್ವಾಂಸರು ನೀಡಿದ ಭಾಷಣಗಳ ಸಂಕಲನ.

### (iv) ಅವಳಿದೆಯ ಜಂಗಮ

ಲೇ. ಎಸ್.ಜಿ. ಸಿದ್ಧರಾಮಯ್ಯ
ಲೇಖಕರ ಈ ಮೊದಲ ಕವನಸಂಕಲನದಲ್ಲಿ 34ಕವನಗಳಿವೆ

### (v) ಒದ್ದೆ ಕಣ್ಣುಗಳ ಪ್ರೀತಿ

ಲೇ. ಸುಧಾಶರ್ಮ ಚವತ್ತಿ, ಸುಧಾ ಅವರ ಚೊಚ್ಚಲ ಕವನಸಂಕಲನವಿದು. 30 ಕವನಗಳಿವೆ. ಬೆಲೆ 15ರೂ.

### (vi) ಬಕುಲದ ಹೂವುಗಳು

ಲೇ. ಸು.ರಂ. ಎಕ್ಕುಂಡಿ, ಇತ್ತೀಚೆಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಹಿರಿಯ ಕವಿ ಸು. ರಂ. ಎಕ್ಕುಂಡಿಯವರ 35 ಕವನಗಳ ಸಂಕಲನ ಇದು.
ಬೆಲೆ : 30ರೂ.

(ಮೇಲಿನ ಈ ಆರು ಪುಸ್ತಕಗಳ ಪ್ರಕಾಶಕರು ; ಕ್ರೈಸ್ಟ್ ಕಾಲೇಜು ಕನ್ನಡ ಸಂಘ, ಬೆಂಗಳೂರು)

## ಕುಡುಕ ಗಂಡುಗಳಿಗೆ ಕತ್ತೆ ಸವಾರಿ

ಕುಡಿದೂ ಕುಡಿದೂ ಬಂದು ತದಕುವ ಗಂಡಂದಿರನ್ನು ಏನು ಮಾಡುತ್ತೀರಿ ? ಹರಿಯಾಣದ ಹೆಂಗಸರು ಇಂಥಾ ಗುಂಡು ಹಾಕುವ ಗಂಡುಗಳನ್ನು ದಾರಿಗೆ ತರುವುದು ಹೇಗೆ ಗೊತ್ತೆ ? ಅವರಿಗೆ ಲಂಗ ತೊಡಿಸಿ, ಚಪ್ಪಲಿ ಹಾರ ಹಾಕಿ ಕತ್ತೆ ಮೇಲೆ ಕೂರಿಸಿ ಊರು ಪೂರಾ ಮೆರವಣಿಗೆ ಹೊರಡಿಸುತ್ತಾರೆ. ದಿನಬೆಳಗಾದರೆ ಕುಡಿತದ ಹಾವಳಿ, ಹೊಡೆತ, ಉಪವಾಸಗಳಿಂದ ಬೇಸತ್ತ ಹರಿಯಾಣದ ಹಳ್ಳಿಗಳ ಹೆಂಗಸರು 'ಕುಡಿತ' ವಿರೋಧಿ ಆಂದೋಲನವನ್ನೇ ಆರಂಭಿಸಿ, ಪ್ರತಿ ಹೆಂಡದಂಗಡಿಯೆದುರು ಝಂಡಾ ಊರಿ, ಅತ್ತ ಸುಳಿಯುವ ಒಬ್ಬೊಬ್ಬರನ್ನೂ, ಅವ ಅವರ ಗಂಡನೇ ಇರಲಿ, ಪರಮ ಪೂಜ್ಯ ಅಳಿಯ ದೇವನೇ ಆಗಲಿ, ಯಾವ ರಿಯಾಯಿತಿ ಇಲ್ಲದೆ ಹಿಡಿದು ಚಪ್ಪಲಿ ಹಾರ ಹಾಕಿ, ಕತ್ತೆಯ ಮೇಲೇರಿಸಿ ಘೋಷಣೆ ಕೂಗುತ್ತಾ ನಡೆದು ಬಿಡುತ್ತಾರೆ. ಈ ಹಳ್ಳಿಗಳ ಗಂಡಸರು ಹೆಂಡ ದಂಗಡಿಯೆದುರು ಸುಳಿಯಲೂ ಹೆದರಿ ನಡುಗಿದರೆ ಅಚ್ಚರಿ ಏನು !

---

ನೀವು ಅತಿ ಮುಖ್ಯ ನಿರ್ಧಾರಗಳನ್ನು ಕೈಗೊಳ್ಳುವಾಗ, ನಿಮ್ಮ ಜೊತೆ ಯಾರಿರಬೇಕೆಂದು ಬಯಸುತ್ತೀರಿ? ಎಂದು ಅಮೆರಿಕೆಯ ಅಧ್ಯಕ್ಷರಾದ ಬಿಲ್‌ಕ್ಲಿಂಟನ್ ಅವರಿಗೆ ಪ್ರಶ್ನೆ ಹಾಕಿದಾಗ. ಅವರು ಕೊಟ್ಟ ಉತ್ತರ 'ಹಿಲರಿ'. ಹಿಲರಿ ಅವರ ಪತ್ನಿ.

---

## ಶಕ್ತಿ ಶಾಲಿನಿ

ದಿಲ್ಲಿಯ ಸತ್ಯರಾಣಿ ಚಾಡಾ 'ಶಕ್ತಿ ಶಾಲಿನಿ' ಕೇಂದ್ರದ ಸ್ಥಾಪಕಿ. ಈ ಕೇಂದ್ರ ವರದಕ್ಷಿಣೆ ಪಿಡುಗಿಗೆ ಗುರಿಯಾದ 250 ವಧುಗಳಿಗೆ ತಮ್ಮ ಹಣವನ್ನು ಮರಳಿ ಪಡೆಯಲು ಜೀವಂತವಾಗಿ ಉಳಿಯಲು ಸಹಾಯ ಮಾಡಿದೆ. ಮಗಳು ಶಶಿಬಾಲ, ಪತಿಗೃಹದಲ್ಲಿ ವರದಕ್ಷಿಣೆ ಸಾವಿಗೆ ಗುರಿಯಾದ ದುರಂತ ಸತ್ಯರಾಣಿಯವರಿಗೆ ಇಂಥಾ ಒಂದು ಸಂಸ್ಥೆಯ ಅಗತ್ಯವನ್ನು ಗುರುತಿಸುವಂತೆ ಮಾಡಿತು. ವಿವಾಹಕ್ಕೆ ಮೊದಲು 'ವರದಕ್ಷಿಣೆ, ಕಾಸೂ ಬೇಡವೆಂದ' ಅಳಿಯ, ಮದುವೆ ದಿನಾಂಕ ಗೊತ್ತಾಗಿ, ಹತ್ತಿರವಾದಂತೆ ಒಂದೊಂದಾಗಿ ಬೇಡಿಕೆಗಳನ್ನು ಮುಂದಿಟ್ಟ. ಫ್ರಿಜ್, ಒಡವೆ, ವಸ್ತ್ರ, ನಗದು, 75,000ಕ್ಕೂ ಮೀರಿತು. ವಿವಾಹವಾದ ನಂತರವೂ ಬೇಡಿಕೆ ನಿಲ್ಲಲಿಲ್ಲ. 'ಸ್ಕೂಟರ್ ಬೇಕು' ಎಂದು ಹಟ ಹಿಡಿದು ಬಂದವನಿಗೆ 'ನಮ್ಮಲ್ಲಿ ಇನ್ನು ಹಣವಿಲ್ಲ' ಎಂದು ಕಳುಹಿಸಿದ ಸತ್ಯರಾಣಿ ಮತ್ತೆ ಮಗಳ ಮುಖ ನೋಡಲಿಲ್ಲ. ಇಂದು 'ಶಕ್ತಿಶಾಲಿನಿ' ವರದಕ್ಷಿಣೆ ವಿರುದ್ಧದ ಹೋರಾಟದಲ್ಲಿ ಸಹಾಯಕವಾಗಿ ನಿಂತಿದೆ.

---

ನಮ್ಮ ಸಂಸ್ಕೃತಿಯಲ್ಲಿ ಸ್ತ್ರೀಯರನ್ನು ದೇವತೆಯಂತೆ ಪೂಜಿಸುತ್ತೇವೆ ಎಂದು ಕೊಚ್ಚಿಕೊಳ್ಳುವವರಿದ್ದಾರೆ. ನಿಜ ಹೆಣ್ಣು ಸತ್ತು ಸತಿಯಾದರೆ, ಇಲ್ಲ ಇದ್ದು ಗೃಹಿಣೀ ಪಟ್ಟದಲ್ಲೋ, ಮಾತೃತ್ವದ ಪರಾಕಾಷ್ಠೆಯಲ್ಲೋ ತ್ಯಾಗದ ತೂಲಕ್ಕೇರಿದರೆ ಆಕೆಯನ್ನು ಖಂಡಿತಾ ಪೀಠದಲ್ಲಿ ಕುಳ್ಳಿರಿಸಿ ಪೂಜಿಸುತ್ತಾರೆ. ಆದರೆ ಅದೇ ಒಬ್ಬ ಅವಿವಾಹಿತ ಹೆಣ್ಣನ್ನೋ, ವಿಚ್ಛೇದಿತಳನ್ನೋ, ವಿಧವೆಯನ್ನೋ ಪೂಜಿಸುವುದಿರಲಿ, ಪೂರ್ವಾಗ್ರಹವಿಲ್ಲದೆ ಅವರೊಡನೆ ವ್ಯವಹರಿಸುವುದೂ ಕಷ್ಟ.

ಬಹುಳಷ್ಟು ಮಧ್ಯಮ ವರ್ಗದ ಒಂಟಿ ಹೆಂಗಸರು ತಮ್ಮ ಅನೇಕ ಅಗತ್ಯಗಳಿಗೆ, ಸಮಸ್ಯೆಗಳಿಗೆ ಯಾರತ್ತ ತಿರುಗುವುದು ಎಂದೂ ತಿಳಿಯದೆ ಉಳಿವುದುಂಟು. ಪುಣೆಯ 'ರೀಚ್ ಔಟ್' ಸಂಸ್ಥೆ ಒಂಟಿ ಹೆಂಗಸರಿಗೆ, (ಅವಿವಾಹಿತರು, ವಿಚ್ಛೇದಿತರು, ವಿಧವೆಯರು, ಉಪೇಕ್ಷಿಸಲ್ಪಟ್ಟ ಗೃಹಿಣಿಯರು ಯಾರೇ ಆಗಲಿ) ಸಹಾಯಕಾರಿಯಾಗಲು ಸ್ಥಾಪಿತವಾಗಿದೆ. ಈ ಸಂಸ್ಥೆಯ ಸ್ಥಾಪಕಿ ಪೂನಮ್‌ರಾವ್, ಒಂಟಿ ಹೆಂಗಸರಿಗೆ ಮಾನಸಿಕ, ಆರ್ಥಿಕ,

ಎಲ್ಲಾ ಬಗೆಯ ಸಹಾಯ ಸಹಕಾರ ನೀಡುವುದಲ್ಲದೆ, ಆರ್ಥಿಕ ಸ್ವಾವಲಂಬನೆಯ ಮಾರ್ಗಗಳನ್ನೂ, ತೋರು ತ್ತಿದ್ದಾರೆ. ಕಾನೂನು ಸಲಹೆ, ಆದಾಯ ತೆರಿಗೆ ವಿವರಣೆ, ಹೀಗೆ ವಾಸ್ತವ ಬದುಕಿನ ಎಲ್ಲ ಅಗತ್ಯಗಳಿಗೂ ನೆರ ವಾಗುವ ಸ್ವಯಂಸೇವಕರ ತಂಡದೊಡನೆ 'ರೀಚ್ ಔಟ್' ಎಲ್ಲ ಮಹಿಳೆಯರತ್ತ ತಲುಪಲು ಯತ್ನಿಸುತ್ತಿರುವ ಸಂಸ್ಥೆ.

---

## ಸಂಘಟನೆಯತ್ತ....

ಸಾಧೂ ಬಾಯಿಗೆ ಗಂಡನಿಲ್ಲ, ಸೋಫಿಯಾಬಿಗೆ ಗಂಡ ನಿದ್ದರೂ ಅವನು ದುಡಿಯಲೊಲ್ಲದವನು. ಈ ಇಬ್ಬರು ಸ್ತ್ರೀಯರ ಮನೆಗಳಿಗೆ ಹತ್ತು ಮೈಲಿ ಅಂತರ. ಅವರು ಒಬ್ಬರೊಬ್ಬರನ್ನು ಕಂಡವರಲ್ಲ. ಒಬ್ಬಾಕೆ ಹುಟ್ಟಿನಿಂದ ಹರಿಜನಳು. ಮತ್ತೊಬ್ಬಳು ಮುಸ್ಲಿಂ. ಎತ್ತರವಾದ ಗೋಡೆಗಳು ಆ ಹಳ್ಳಿಯಲ್ಲಿ ಅವರನ್ನು ಬೇರೆಯಾಗಿಟ್ಟಿ ದ್ದುವು ಒಮ್ಮೆ ಆಸ್ಪತ್ರೆಯ ಗೇಟಿನ ಬಳಿ ಅವರು ಸಂಧಿಸು ವವರೆಗೆ ಮಾತ್ರ. ಹಳ್ಳಿಯ ಆರೋಗ್ಯ ಕಾರ್ಯಕರ್ತೆಯ ರಾಗಿ ತರಬೇತು ಪಡೆಯಲಿಕ್ಕಾಗಿ ಸಮಾಜ ಸೇವಕಿಯರು ಅವರಿಬ್ಬರನ್ನೂ ಕರೆತಂದಾಗ ಮುಖಾಮುಖಿಯಾದರು. 'ಓ ಇವಳು ಹಣೆಗೆ ಕುಂಕುಮ ಹಚ್ಚುತ್ತಾಳೆ' ಸೋಫಿಯಾ ಅಂದುಕೊಂಡಳು. 'ಓ ಇವಳು ಮುಖಕ್ಕೆ ಪರದೆ ಹಾಕಿ ಕೊಂಡು ಸುತ್ತಾಡುತ್ತಾಳೆ' ಎಂದುಕೊಂಡಳು ಸಾಧೂ ಬಾಯಿ. ತಮ್ಮ ತಮ್ಮ ಗೊತ್ತಾದ ಮೂಲೆಗಳಲ್ಲಿ ಮುದುಡಿ ಕುಳಿತಿದ್ದ ಅವರಿಗೆ ನಿಧಾನವಾಗಿ ಅರಿವಾಗ ತೊಡಗಿತು. ತಮ್ಮಿಬ್ಬರ ಬದುಕುಗಳು ಒಂದೇ ರೀತಿ ಇವೆ. ನೀರುಕಾಣದ ಜಮೀನು, ಅತ್ಯಲ್ಪ ಬೆಳೆ, ಹಣದ ಅಭಾವ, ಅರೆ ಹೊಟ್ಟೆ ತಿನ್ನುವ ಮಕ್ಕಳು, ಇದ್ದರೂ ಸೋಮಾರಿಯಾದ ಗಂಡ ಅಥವಾ ಗಂಡನಿಲ್ಲದ ಸ್ಥಿತಿ....

ಮಹಾರಾಷ್ಟ್ರದ ಹಳ್ಳಿಯಾದ ಜಮಖೇಡದಲ್ಲಿ ಆರೋಗ್ಯ ಕಾರ್ಯಕರ್ತರು ಹೀಗೆ ಎಂದೂ ಪರಸ್ಪರ ಕಂಡಿರದಿದ್ದ ನೂರಾರು ಮಹಿಳೆಯರನ್ನು ಒಗ್ಗೂಡಿಸಿದ ಬಗೆಗೆ ಇದೊಂದು ನಿದರ್ಶನವಷ್ಟೆ.

[ಭಾರತದ ಸುಪ್ರಸಿದ್ದ ಪತ್ರಕರ್ತೆಯರಲ್ಲೊಬ್ಬರಾದ **Anees Jung** ಅವರ **'Unveiling India' A Women's Journey** ಯಿಂದ]

---

## ಮಹಿಳೆಯರನ್ನು ಕುರಿತಂತೆ

ಮಹಿಳಾ ಸಂಘಟನೆ ಬಗೆಗೆ ನನಗೆ ಅತೀವ ವಿಶ್ವಾಸ, ಮಹಿಳೆಯರಲ್ಲಿ ಆತ್ಮ ವಿಶ್ವಾಸ ಮೂಡಿಸುವುದಾದರೆ, ಸಮಾಜದ ಸ್ಥಿತಿಗತಿ ಉತ್ತಮಪಡಿಸಲು ಅವರು ನೆರ ವಾಗುತ್ತಾರೆ ಎಂದು ನನಗೆ ಗೊತ್ತು. ಸಾಮಾಜಿಕ ಪಾಪ ಗಳನ್ನು ನಿರ್ಮೂಲನ ಮಾಡುವುದರಲ್ಲಿ ಮಹಿಳೆಯರ ಕೊಡುಗೆ ಮಹತ್ವದ್ದಾಗಿರುತ್ತದೆ. ಸಮುದಾಯವೊಂದರ ಪ್ರಗತಿಯನ್ನು ಅದರ ಮಹಿಳೆಯರ ಪ್ರಗತಿಯನ್ನು ಅನು ಸರಿಸಿ ನಾನು ಅಂದಾಜುಮಾಡುತ್ತೇನೆ. ನಾನು ಹೇಳುವ ಕೆಲವು ಅಂಶಗಳನ್ನು ನೀವು ಮನಸ್ಸಿನಲ್ಲಿಟ್ಟುಕೊಳ್ಳಬೇಕು, ಸ್ವಚ್ಛತೆಯನ್ನು ಕಲಿಯಿರಿ. ಕೆಟ್ಟಗುಣಗಳೆಲ್ಲದರಿಂದ ದೂರ ವಿರಿ. ನಿಮ್ಮ ಮಕ್ಕಳಿಗೆ ಶಿಕ್ಷಣ ನೀಡಿರಿ. ಅವರಲ್ಲಿ ಮಹ ತ್ವಾಕಾಂಕ್ಷೆಯನ್ನು ಮೂಡಿಸಿ ಅವರು ಮಹತ್ವದವರಾಗು ತ್ತಾರೆ ಎಂಬ ಭಾವನೆಯನ್ನು ಅವರ ಮನಸ್ಸಿನಲ್ಲಿ ಮೂಡಿ ಸಿರಿ. ಅವರ ಮನಸ್ಸಿನಿಂದ ಎಲ್ಲಾ ಬಗೆಯ ಕೀಳರಿಮೆ ಯನ್ನು ತೊಡೆದುಹಾಕಿರಿ, ವಿವಾಹವಾಗಲು ಆತುರ ಪಡ ಬೇಡಿ, ವಿವಾಹವಾಗುವವರು ಹೆಚ್ಚು ಹೆಚ್ಚು ಮಕ್ಕಳನ್ನು ಹಡೆಯುವುದು ಅಪರಾಧ ಎಂಬ ಅಂಶವನ್ನು ಮನಸ್ಸಿ ನಲ್ಲಿರಿಸಿಕೊಳ್ಳಬೇಕು. ಎಲ್ಲಕ್ಕಿಂತ ಮಿಗಿಲಾಗಿ ವಿವಾಹ ವಾಗುವ ಪ್ರತಿಯೊಬ್ಬ ಮಹಿಳೆ ತನ್ನ ಗಂಡನ ಸ್ನೇಹಿತ ಳಂತೆ ಸಮಾನಹಕ್ಕು ಉಳ್ಳವಳಾಗಿರಬೇಕು. ಮತ್ತು ಆತನ ಗುಲಾಮಳಾಗುವುದನ್ನು ಧಿಕ್ಕರಿಸಬೇಕು.

**ಡಾ. ಬಿ.ಆರ್. ಅಂಬೇಡ್ಕರ್**

---

ಹೋರಾಟಕ್ಕಾಗಿ ನಾವು ಹೋರಾಡಬೇಕಾಗಲಾರದು. ಅದು ಖಂಡಿತಾ ನಮಗೆ ಬರಲಿದೆ. ಯುದ್ಧ–ಹೋರಾಟದ ಭಯ ನಮಗಿಲ್ಲ.

**— ಕಿರಣ್‌ಸಿಂಗ್**

(ಭೂಸೇನೆಗೆ ಸೇರ್ಪಡೆಯಾದ ಮೊಟ್ಟ ಮೊದಲ ಮಹಿಳೆ ಯರಲ್ಲೊಬ್ಬರು)

ವೈವಿಧ್ಯಮಯವಾದ ಹೊಸಬಗೆಯ ಕಾರ್ಯಗಳನ್ನು ಒಪ್ಪಿಕೊಳ್ಳುವುದರ ಮೂಲಕ, ಸಾಮಾಜಿಕವಾಗಿ ಮೌಲಿಕವೆನಿಸುವ, ಪ್ರತಿಫಲ ನೀಡುವಂಥ ಕ್ರಿಯೆಗಳ ಮೂಲಕ ಮಹಿಳೆಯ ಸ್ಥಾನಮಾನ ಬಹಳಷ್ಟು ಸುಧಾರಿಸಿದೆ. ತನ್ನ ಅನೇಕ ಕೀಳರಿಮೆಗಳಿಂದ ಇಂದು ಹೆಣ್ಣು ದೂರವಾಗುತ್ತಿದ್ದಾಳೆ. ತನ್ನನ್ನು ಸಮಾನ ನೆಲೆಯ ಪಾಲುದಾರಳೆಂದು ಕಾಣಬಲ್ಲ ಆಕೆ ಇತ್ತೀಚಿನವರೆಗೂ ಸರಿಯೆನಿಸಿದ್ದ ದ್ವಿಸ್ತರನ್ಯಾಯದ ಮಾನದಂಡಗಳನ್ನು ಇಂದು ದ್ವೇಷಿಸುತ್ತಾಳೆ. ತನ್ನಲ್ಲಿದ್ದ ಅಂಜುಗುಳಿತನ, ಜಡತೆ, ಆತ್ಮಹಿಂಸಾರತಿ ಮತ್ತು ಸುತ್ತುಬಳಸಿನ ಹಾದಿ ಹಿಡಿದ ಗುಣಗಳನ್ನು ಆಕೆ ಬಹುಮಟ್ಟಿಗೆ ಬದಲಾಯಿಸಿಕೊಂಡಿದ್ದಾಳೆ.

— **ವಯೋಲಾ ಕ್ಲೈನ್**

---

***Reg No MAG (5) PRC,DEGL 036/89/87***
**BOOK-POST/Periodicals**

**To,**

*If undelivered please return to :*
**Jagruthi Mahila Adhyayana Kendra**
**401, Vijay Tower, 2nd Main, RPC Layout**
**Vijayanagar, II Stage, Bangalore-40**
**Pin-560 040**